

ಕರ್ನಾಟಕ

# ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ



# KARNATAKA SCOUT & GUIDE *News Magazine*

VOL. - 5 MAY - 2005 No. - 4



Sri J. Narasimhaswamy, M.L.A. Doddaballapur, Sri Kondajji B. Shanmukhappa, SCC, Sri Hanumappa, Ex-President Taluk Panchayat Doddaballapur & Sri N. Chandrashekar, ASC(S) at the inaugural function of the Preparatory Camp for Scouts & Guides held at Basanth Park on 17th April 2005



Sri Athani Kotresh, President Dist. Assn, BS&G Davanagere, Sri Kondajji B. Shanmukhappa, SCC, Sri S. Maheshwaraiah Dist. Information & Publicity Officer, Sri Poolchand Shaw, Vice President IRCS, & Sri Md. Wasil, H.Q.C at the innugural function of the Preparatory Camp for Scouts & Guides held at Kondajji on 27th April 2005.



Sri G.H. Tippareddy, M.L.A. Inaugurating the Bangalore Divisional level ADC's, Secretaries & Life Members Meet at Chitradurga on 28-03-2005. Sri S.R. Umashankar, IAS Deputy Commissioner, SCC, SC(S), SC(G), JSS(G) & Dist. Office Bearers are also seen.

## SCOUTS & GUIDES AT BESANT PARK







*Theme :*

# Preserve Nature, Serve the future

15 National Jamboree of The Bharat Scouts & Guides

The Bharat Scouts & Guides will be Organising the 15th National Jamboree from 16th to 22nd October 2005 at Neel Dhara in Haridwar, Uttaranchal State. Nearly 25 thousand Scouts and Guides from the entire country are expected to participate. An additional 5000 are expected to reach from overseas.

HARIDWAR - the most pious of all cities. This is the place where the holy Ganga leaves the Himalayas and enters the plains of India. UTTARANCHAL is the 27th state of the Republic of India. (total states being 28) It was formed on 9th Nov 2000 and was earved out of Utter Pradesh. Uttaranchal lies in the Northern part of India amidst the magnificent Himalayas and dense forests. The State is bordering Himachal Pradesh in the north-west and Uttar Pradesh in the South and has international borders with Nepal and China.

**How to reach :** Haridwar is well connected by rail. It can also the reached by road. **Weather :** Nights during the jamboree period will be fairly cold. Temperatures range from a max of 25 degrees during the days to a minimum of 10 degrees in the nights. Light to medium heavy woolens are generally required during October. **Registration Fee & Development Fee to be Paid to NHQ :** a) for Scouts and Guides Rs. 250/- per Head, b) For Adult Leaders Rs. 300/- per Head Eligibility : Groups of Scouts and Guides between the age of 14 and 17 years, led by an Adult leaders. **Programmes :** The programme is action packed with excitement, fun and adventure activities. It is based on the fundamentals of Scouting and Guiding. Community singing, Regional Cultural Village & State expositions. Religion Village, Pageant Shows, State days, Rock Climbing, trekking, Environmental Activities. HAM Radio, HWB Re-union, Trainers Meet, Youth Forum, Integration Games, Handicrafts, Science City, Water Sports Activities, Adventure in the Himalaya ranges, Parasailing, Exhibitions etc. Arrangements are also made for tours to special places of interest. The Scouts & Guides and their leaders will get opportunity to interact and make friends at global level.

*Sources : Information Bulletin, The Bharat Scouts & Guides, New Delhi*



ಕರ್ನಾಟಕ
# ಸ್ಕೌಟ್ ಮತ್ತು ಗೈಡ್
ಮಾಸ ಪತ್ರಿಕೆ
KARNATAKA SCOUT & GUIDE News Magazine



Vol - 5 May - 2005 No.4



## ಪರಿವಿಡಿ



**Scouting / Guiding helps build a better world Where Young People Play a Constructive role.**

# ರಾಜ್ಯ ಮುಖ್ಯಆಯುಕ್ತರ ನುಡಿ

**ಮಾನ್ಯರೆ,**

ತಾರಣ ನಾಮ ಸಂವತ್ಸರ ಮುಗಿದು - ಪಾರ್ಥಿವನಾಮ ಸಂವತ್ಸರಕ್ಕೆ ಕಾಲಿಟ್ಟಿದ್ದೇವೆ. ತಮಗೆಲ್ಲಾ ನೂತನ ವರ್ಷ ಚಳವಳಿಯ ಹೆಜ್ಜೆ ಗುರುತನ್ನು ಹೆಚ್ಚಿಸುವಲ್ಲಿ ಅವಕಾಶಗಳು ವಿಪುಲವಾಗಲಿ ಎಂದು ಪ್ರಾರ್ಥಿಸುತ್ತೇನೆ.

ಹೋದ ವರ್ಷದಲ್ಲಿ ರಾಜ್ಯದೆಲ್ಲೆಡೆ ಸಾಕಷ್ಟು ಕಾರ್ಯಕ್ರಮಗಳು, ತರಬೇತಿಗಳು ಜರುಗಿದ್ದು ಸಾವಿರಾರು ವಿವಿಧ ಹಂತದ ಕಾರ್ಯಕರ್ತರುಗಳು ಚಳವಳಿಯ ಅವಿಭಾಜ್ಯ ಅಂಗವಾಗಿ ಕರ್ತವ್ಯ ನಿರ್ವಹಿಸಿದ್ದಾರೆ. ಸಹಾಯಕ ಆಯುಕ್ತರುಗಳ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳ ಹಾಗೂ ಕೋಶಾಧಿಕಾರಿಗಳ ವಿಭಾಗ ಮಟ್ಟದ ಮೂರು ಸಮಾವೇಶಗಳು ಚಿಕ್ಕಮಗಳೂರು-ಗುಮಕ್ಷೇರಾ, ಕೊಪ್ಪಳ ಜಿಲ್ಲೆ ಹಾಗೂ ಚಿತ್ರದುರ್ಗದಲ್ಲಿ ಯಶಸ್ವಿಯಾಗಿ ಜರುಗಿವೆ. ಈಗಾಗಲೇ 26ನೇ ರಾಜ್ಯ ಕಬ್-ಬುಲ್‌ಬುಲ್ ಉತ್ಸವವನ್ನು ಮಡಕೇರಿಯಲ್ಲಿ ಉತ್ಸಾಹದಿಂದ ನೆರವೇರಿಸಲಾಗಿದೆ.

ಬಹುದಿನಗಳ ನಿರೀಕ್ಷಣೇಯ 25ನೇ ರಾಜ್ಯ ಸ್ಕೌಟ್ -ಗೈಡ್ ಜಾಂಬೋರೇಟ್ ದಾವಣಗೆರೆ ನಗರದಲ್ಲಿ ಜುಲೈ-ಆಗಸ್ಟ್‌ನಲ್ಲಿ ನಡೆಸಲು ಸಿದ್ಧತೆ ಜರುಗುತ್ತಲಿವೆ. ರಾಜ್ಯ ಸರ್ಕಾರ ಜಾಂಬೋರೇಟ್‌ನ್ನು ಯಶಸ್ವಿಯಾಗಿ ಜರುಗಿಸಲು ವಿಶೇಷ ಅನುದಾನವನ್ನು ನೀಡಿದೆ.

ಸರ್ಕಾರ ಆಯೋಜಿಸಿರುವ ಪಲ್ಸ್-ಪೋಲಿಯೋ ಕಾರ್ಯಕ್ರಮದಲ್ಲಿ ಚಳವಳಿಯ ಎಲ್ಲ ಹಂತದ ಕಾರ್ಯಕರ್ತರು ಹಾಗೂ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ರಾಜ್ಯದೆಲ್ಲಡೆ ಸಕ್ರಿಯವಾಗಿ ಭಾಗವಹಿಸಿದ ಬಗ್ಗೆ ವರದಿಗಳು ಬಂದಿವೆ. ಸಂಬಂಧ ಪಟ್ಟ ಎಲ್ಲರಿಗೂ ನಮ್ಮ ನಮನಗಳು.

ಚಳವಳಿಯ ಮೂಲ ಉದ್ದೇಶವೇ ಯುವಜನಾಂಗದಲ್ಲಿ ಶಿಸ್ತು - ಸೇವೆ - ಆತ್ಮಸ್ಥೈರ್ಯ ಹಾಗೂ ಗುಣಾತ್ಮಕ ಮೌಲ್ಯಗಳನ್ನು ತುಂಬುವ ಚಿಂತನೆಗಳು, ಇವುಗಳ ಮುಖೇನ ಯುವಶಕ್ತಿಯ ವ್ಯಕ್ತಿತ್ವ ವಿಕಸನಗೊಳಿಸುವತ್ತ ಮಾರ್ಗದರ್ಶನ ನೀಡುವ ಪ್ರಯತ್ನ ಸದಾ ನಡೆಯುತ್ತಲೇ ಇದೆ.

ಮಾರ್ಚ್ ಕೊನೇವಾರದಲ್ಲಿ ಚಿತ್ರದುರ್ಗದಲ್ಲಿ ಜರುಗಿದ ಬೆಂಗಳೂರು ವಿಭಾಗದ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳ ಸಮಾವೇಶದಲ್ಲಿ ಭಾಗವಹಿಸಿ, ಕೊಪ್ಪಳದಲ್ಲಿ ಜರುಗಿದ ಜಿಲ್ಲಾ ಪುರಸ್ಕಾರ ಪ್ರಧಾನ ಸಮಾರಂಭದಲ್ಲಿ ಪಾಲ್ಗೊಂಡಿದ್ದೇನೆ. ಕೊಪ್ಪಳ ಜಿಲ್ಲಾಧಿಕಾರಿ - ಜಿಲ್ಲಾ ಪಂಚಾಯಿತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹಾಗೂ ಜಿಲ್ಲೆಯ ಪದಾಧಿಕಾರಿಗಳನ್ನು ಭೇಟಿ ಮಾಡಿ ತರಬೇತಿ ಕೇಂದ್ರದ ಅಭಿವೃದ್ಧಿ ಹಾಗೂ ಚಳುವಳಿಯನ್ನು ಬಲಪಡಿಸುವ ಬಗ್ಗೆ ಚರ್ಚಿಸಿದ್ದೇನೆ.

ನಂತರದಲ್ಲಿ ಗದಗ್ ಜಿಲ್ಲೆಗೆ ಭೇಟಿ ನೀಡಿ ಜಿಲ್ಲಾಧಿಕಾರಿಗಳು, ವಿದ್ಯಾ ಇಲಾಖೆ ಉಪನಿರ್ದೇಶಕರು ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಜಿಲ್ಲಾ ಸ್ಕೌಟ್ ಆಯುಕ್ತರು ಹಾಗೂ ಜಿಲ್ಲಾ ಪದಾಧಿಕಾರಿಗಳು, ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಸಂಘಟನಾಧಿಕಾರಿ ಅವರುಗಳೊಂದಿಗೆ ಚಳವಳಿಯ ಬೆಳವಣಿಗೆಯ ಬಗ್ಗೆ ಚರ್ಚಿಸಿ ಈ ವರ್ಷದಲ್ಲಿ ಕಾರ್ಯಕ್ರಮಗಳು ಹಾಗೂ ತರಬೇತಿ ಶಿಬಿರಗಳನ್ನು ಜರುಗಿಸುವ ಬಗ್ಗೆ ಹಾಗೂ ಜಿಲ್ಲೆಯ ತರಬೇತಿ ಕೇಂದ್ರದಲ್ಲಿ ಹಲವು ಮೂಲಭೂತ ಸೌಕರ್ಯಗಳನ್ನು ಒದಗಿಸುವ ಬಗ್ಗೆ ಚರ್ಚಿಸಿದ್ದೇನೆ. ಹಾವೇರಿ ಜಿಲ್ಲಾ ಸಂಸ್ಥೆಗೂ ಭೇಟಿ ನೀಡಿ ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲಾ ತರಬೇತಿ ಹಾಗೂ ಸಂಘಟನಾಧಿಕಾರಿಯವರೊಂದಿಗೆ ಚರ್ಚಿಸಿದ್ದೇನೆ.

ಬೆಂಗಳೂರಿಗೆ ಹಿಂತಿರುಗುವ ಮುಂಚೆ ದಾವಣಗೆರೆ ಜಿಲ್ಲಾ ಸಂಸ್ಥೆಗೆ ಭೇಟಿ ನೀಡಿ - ರಜತ ಜಾಂಬೋರಿ ಜುಲೈ-ಆಗಸ್ಟ್‌ನಲ್ಲಿ ನಡೆಸುವ ಬಗ್ಗೆ ವಿಚಾರ ವಿನಿಮಯ ಮಾಡಿದ್ದೇನೆ.

ದಿನಾಂಕ ಏಪ್ರಿಲ್ 17 ರಿಂದ 21ರ ವರೆಗೆ ಬೆಸೆಂಟ್ ಪಾರ್ಕ್‌ನಲ್ಲಿ ರಾಷ್ಟ್ರಪತಿ ಪೂರ್ವಭಾವಿ ತರಬೇತಿ ಶಿಬಿರ ಯಶಸ್ವಿಯಾಗಿ ಜರುಗಿದೆ. ರಾಜ್ಯದ 14 ಜಿಲ್ಲೆಗಳಿಂದ 337 ಸ್ಕೌಟ್ಸ್. 300 ಗೈಡ್ಸ್ ಹಾಗೂ ತರಬೇತಿ ಸಿಬ್ಬಂದಿ ಭಾಗವಹಿಸಿದ್ದರು. ದೊಡ್ಡಬಳ್ಳಾಪುರದ ಮಾನ್ಯ ಶಾಸಕರಾದ ಶ್ರೀ ಜೆ. ನರಸಿಂಹಸ್ವಾಮಿ ಶಿಬಿರವನ್ನು ದಿನಾಂಕ 17 ರಂದು ಉದ್ಘಾಟಿಸಿ ಎಲ್ಲಾ ಶಿಬಿರಾರ್ಥಿಗಳಿಗೂ ಯಶಸ್ವಿನ್ನು ಕೋರಿದರಲ್ಲದೆ ಶಿಬಿರದ ಅಭಿವೃದ್ಧಿಗೆ ತಮ್ಮ ಸಹಾಯ - ಸಹಕಾರ ಸದಾ ಇರುವುದಾಗಿ ಆಶ್ವಾಸನೆ ಇತ್ತರು. ನಾನು, ಶ್ರೀ ಎಸ್. ಚಂದ್ರಶೇಖರ್, ಶ್ರೀ ಚೆಲ್ಲಯ್ಯ ಸಮಾರಭದಲ್ಲಿ ಭಾಗವಹಿಸಿದ್ದೆವು.

ದಿನಾಂಕ ಏಪಿಲ್ 26 ರಿಂದ 30ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರದಲ್ಲಿ ಜರುಗಿದ ಶಿಬಿರಕ್ಕೆ ರಾಜ್ಯದ 14 ಜಿಲ್ಲೆಗಳಿಂದ 390 ಸ್ಕೌಟ್ಸ್ - 200 ಗೈಡ್ಸ್ ಹಾಗೂ ಸಿಬ್ಬಂದಿ ಭಾಗವಹಿಸಿದ್ದರು. ದಿನಾಂಕ 27 ರಂದು ಶಿಬಿರದ ಉದ್ಘಾಟನೆಯನ್ನು ದಾವಣಗೆರೆ ಜಿಲ್ಲಾ ಸಂಸ್ಥೆ ಅಧ್ಯಕ್ಷರೂ ಹಾಗೂ ದಾವಣಗೆರೆ ನಗರದ ಗಣ್ಯ ವಾಣಿಜ್ಯೋದ್ಯಮಿಯೂ ಆದ ಶ್ರೀ ಅಥಣಿ ಕೊಟ್ರೇಶ್ ಮುಖ್ಯ ಅತಿಥಿಗಳಾಗಿ ಶಿಬಿರವನ್ನು ಉದ್ಘಾಟಿಸಿದರು. ದಾವಣಗೆರೆಯಲ್ಲಿ 25ನೇ ರಜತ ಸ್ಕೌಟ್ಸ್-ಗೈಡ್ ಜಾಂಬೋರಿಯನ್ನು ಮಾನ್ಯ ಮಂತ್ರಿಗಳು, ಮಾನ್ಯ ಶಾಸಕರು ಹಾಗೂ ಜಿಲ್ಲಾಡಳಿತ, ಜಿಲ್ಲಾ ಪಂಚಾಯತ್ ನೆರವಿನೊಂದಿಗೆ ಅತ್ಯಂತ ಯಶಸ್ವಿಯಾಗಿ ಆಚರಿಸುವುದಾಗಿ ಘೋಷಿಸಿದರು. ದಾವಣಗೆರೆ ಜಿಲ್ಲಾ ವಾರ್ತಾ ಹಾಗೂ ಪ್ರಚಾರಾಧಿಕಾರಿ ಶ್ರೀ ಎಸ್. ಮಹೇಶ್ವರಯ್ಯ, ರೆಡ್‌ಕ್ರಾಸ್ ಸಂಸ್ಥೆ ಉಪಾಧ್ಯಕ್ಷರು, ಹಾಗೂ ನಮ್ಮ ಸಂಸ್ಥೆ ಎ.ಡಿ.ಸಿ. ಆದ ಶ್ರೀ ಪೂಲ್‌ಚಂದ್‌ಷಾ, ಶ್ರೀ ಮಹಮದ್ ವಾಸಿಲ್, ನಾನು ಹಾಗು ಶ್ರೀ ಎಂ.ಎ. ಚೆಲ್ಲಯ್ಯ ಸಮಾರಂಭದಲ್ಲಿ ಪಾಲ್ಗೊಂಡೆವು.

ದಿನಾಂಕ ಮೇ 31 ರಿಂದ 7ರ ವರೆಗೆ ಎಂ.ಆರ್.ಪಿ.ಎಲ್. ಶಾಲೆ ಸುರತ್ಕಲ್‌ನಲ್ಲಿ ದಕ್ಷಿಣ ಕನ್ನಡ-ಉಡುಪಿ ಜಿಲ್ಲೆಗಳ ಅಭ್ಯರ್ಥಿಗಳಿಗೆ ರಾಷ್ಟ್ರಪತಿ ಸ್ಕೌಟ್ಸ್-ಗೈಡ್ಸ್ ಪೂರ್ವಭಾವಿ ಸಿದ್ಧತಾ ಶಿಬಿರವನ್ನು ಯಶಸ್ವಿಯಾಗಿ ಜರುಗಿಸಲಾಯಿತು. 183 ಗೈಡ್ಸ್ ಹಾಗೂ 73 ಸ್ಕೌಟ್ಸ್ ಶಿಬಿರದಲ್ಲಿ ಭಾಗವಹಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ.ಎ. ಕೈರನ್ನ, ಗೈಡ್ಸ್ ಆಯುಕ್ತೆ ಶ್ರೀ ಮತಿ ಐರಿನ್ ಡಿಕುನ್ಹ ಹಾಗೂ ಇತರ ಪದಾಧಿಕಾರಿಗಳು ಶಿಬಿರದ ಯಶಸ್ವಿಗೆ ಶ್ರಮಿಸಿದರು.

ಸರ್ಕಾರ, ಸಮಾಜ, ಸಮುದಾಯ, ಚಳವಳಿಯ ಬೆಳವಣಿಗೆಗೆ ಹೆಚ್ಚಿನ ನೆರವು ನೀಡುವ ಭರವಸೆ ಅಪಾರವಾಗಿದೆ. ಈ ವರ್ಷದಲ್ಲಿ ನಾವುಗಳು ದೃಢ ನಿರ್ಧಾರ ಮಾಡಿ ಚಳವಳಿಯನ್ನು ರಾಜ್ಯದ ಹೆಚ್ಚಿನ ಶಾಲೆಗಳಿಗೆ ವಿಸ್ತರಿಸುವಲ್ಲಿ ಹೆಚ್ಚಿನ ಪ್ರಯತ್ನ ಮಾಡೋಣ ಹಾಗೂ ನಮ್ಮಗಳ ಗುರಿ ಮುಟ್ಟುವಲ್ಲಿ ಯಶಸ್ವಿಯಾಗೋಣ ಎಂದು ಆಶಿಸುತ್ತೇನೆ.

ತಾವುಗಳು ಯೋಜಿಸಿರುವ ಕಾರ್ಯಯೋಜನೆಗಳಲ್ಲಿ ರಾಜ್ಯ ಸಂಸ್ಥೆ ತಮ್ಮೊಂದಿಗೆ ಸದಾ ಇದ್ದೇವೆ ಎಂಬ ಭರವಸೆ ಕೊಡಲಿಚ್ಛಿಸುತ್ತೇನೆ. ನಮಗೆ ಈ ಚಳವಳಿಯಲ್ಲಿ ಸೇವೆ ಮಾಡಲು ಅವಕಾಶ ಸಿಕ್ಕಿರುವುದು ಭಗವಂತನ ಅನುಗ್ರಹ ಹಾಗೂ ಹಿರಿಯರ ಆಶೀರ್ವಾದದಿಂದ. ಇಂತಹ ಅವಕಾಶದ ಸಂಪೂರ್ಣ ಸದುಪಯೋಗ ಮಾಡುವಲ್ಲಿ ಗುರು-ಹಿರಿಯರ ಕೃಪೆ ಸದಾ ನಮ್ಮಗಳ ಮೇಲಿರಲಿ ಎಂದು ಪ್ರಾರ್ಥಿಸುತ್ತೇನೆ.

ತಮ್ಮ ವಿಶ್ವಾಸಿ

ಕೊ.ಬ.ಷಣ್ಮುಖಪ್ಪ

(ಕೊಂಡಜ್ಜಿ ಬ. ಷಣ್ಮುಖಪ್ಪ)

# ಬೆಸೆಂಟ್ ಪಾರ್ಕ್‌ನಲ್ಲಿ ಜರುಗಿದ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪೂರ್ವಬಾವಿ ತರಬೇತಿ ಶಿಬಿರ

ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪೂರ್ವಬಾವಿ ತರಬೇತಿ ಶಿಬಿರವು ಏಪ್ರಿಲ್ 17 ರಿಂದ 21ರ ವರೆಗೆ ಬೆಸೆಂಟ್ ಪಾರ್ಕ್ ರಾಜ್ಯ ತರಬೇತಿ ಕೇಂದ್ರದಲ್ಲಿ ಯಶಸ್ವಿಯಾಗಿ ನಡೆಯಿತು, ರಾಜ್ಯದ 14 ಜಿಲ್ಲೆಗಳಿಂದ, 337 ಸ್ಕೌಟ್ಸ್, 24 ಸ್ಕೌಟ್ ಮಾಸ್ಟರ್, 20 ಸಿಬ್ಬಂದಿ, 300 ಗೈಡ್ಸ್, 50 ಗೈಡರ್ಸ್, ಒಟ್ಟು 731 ಭಾಗವಹಿಸಿದ್ದರು. ಶ್ರೀ ಸಿ. ಸುಬ್ರಮಣ್ಯಂ ಎ.ಎಲ್.ಟಿ. (ಸ್ಕೌಟ್) ಸ್ಕೌಟ್ ವಿಭಾಗಕ್ಕೆ ಶ್ರೀಮತಿ ಶಾರದ ಎ.ಎಲ್.ಟಿ. (ಗೈಡ್) ಗೈಡ್ ವಿಭಾಗಕ್ಕೆ ನಾಯಕರಾಗಿದ್ದರು.

**ಉದ್ಘಾಟನೆ :** ದಿನಾಂಕ 17.04.2005 ರಂದು ಸಂಜೆ 5-00 ಘಂಟೆಗೆ ಉದ್ಘಾಟನಾ ಸಮಾರಂಭ ನಡೆಯಿತು ಶ್ರೀ ಜೆ. ನರಸಿಂಹಸ್ವಾಮಿ ಮಾನ್ಯ ವಿಧಾನಸಭಾ ಸದಸ್ಯರು ದೊಡ್ಡಬಳ್ಳಾಪುರ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಶಿಬಿರವನ್ನು ಉದ್ಘಾಟಿಸಿ ಮಾತನಾಡುತ್ತಾ. ಸ್ಕೌಟ್ಸ್ ಗೈಡ್ಸ್‌ಗಳು ಉತ್ತಮ ತರಬೇತಿ ಪಡೆದು ರಾಷ್ಟ್ರಪತಿ ಪದಕ ಪಡೆದು ಜೀವನದಲ್ಲಿ ಶಿಸ್ತು ಸಂಯಮ ಮತ್ತು ಸೇವಾ ಮನೋಭಾವ ಬೆಳೆಸಿಕೊಳ್ಳಲು ಸೂಚಿಸಿದರು. ಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರಕ್ಕೆ ಅಗತ್ಯವಿರುವ ಶೌಚಾಲಯ ಮತ್ತು ಬೋರ್‌ವೆಲ್ ವ್ಯವಸ್ಥೆಯನ್ನು ಜಿಲ್ಲಾ ಪಂಚಾಯಿತ್ ಅನುದಾನದಿಂದ ಮಂಜೂರು ಮಾಡಿಕೊಡುವುದಾಗಿ ತಿಳಿಸಿದರು. ಶ್ರೀ ಹನುಮಪ್ಪ ಮಾಜಿ ಅಧ್ಯಕ್ಷರು ತಾಲ್ಲೂಕು ಪಂಚಾಯತ್ ದೊಡ್ಡಬಳ್ಳಾಪುರ ಇವರು ಅತಿಥಿಗಳಾಗಿ ಉಪಸ್ಥಿತರಿದ್ದರು.

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ರಾಷ್ಟ್ರಪತಿ ಪದಕ ಪಡೆಯುವಂತೆ ತಿಳಿಸಿ ಈ ಶಿಬಿರದಲ್ಲಿ ಇನ್ನು ಹೆಚ್ಚಿನ ಜ್ಞಾನ ಪಡೆಯುವಂತೆ ನುಡಿದರು. ಈ ಶಿರದಲ್ಲಿ ಭಾಗವಹಿಸಲು ಆಗದೇ ಇರುವ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಕೊಂಡಜ್ಜಿ ತರಬೇತಿ ಕೇಂದ್ರದಲ್ಲಿ 26 ರಿಂದ ಪ್ರಾರಂಭವಾಗುವ ಶಿಬಿರದಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಿದೆ ಎಂದರು. ಶ್ರೀ ಎನ್. ಚಂದ್ರಶೇಖರ್ ಸಹಾಯಕ ರಾಜ್ಯ ಆಯುಕ್ತರು (ಯೋಜನೆ) ಇವರು ಕೂಡ ಅತಿಥಿಗಳಾಗಿ ಭಾಗವಹಿಸಿ ಮಾತನಾಡಿದರು. ಶ್ರೀ ಎಂ.ಎ. ಚೆಲ್ಲಯ್ಯ ಕೇಂದ್ರ ಸ್ಥಾನಿಕ ಆಯುಕ್ತರು ಎಲ್ಲರನ್ನು ವಂದಿಸಿದರು.

ಈ ಶಿಬಿರದಲ್ಲಿ ಪ್ರವೇಶದಿಂದ ರಾಷ್ಟ್ರಪತಿ ಪದಕ ಪಡೆಯಲು ಬೇಕಾದ ಎಲ್ಲಾ ವಿಷಯಗಳನ್ನು ಬೋಧಿಸಲಾಯಿತು, ಶಿಬಿರಾಗ್ನಿ, ಸರ್ವಧರ್ಮ ಪ್ರಾರ್ಥನೆ ಹಾಗೂ ಶಿಬಿರದಲ್ಲಿ ಸ್ವಚ್ಛತಾ ಕಾರ್ಯಕ್ರಮ ಹಮ್ಮಿಕ್ಕೊಳ್ಳಲಾಗಿತ್ತು. ಶ್ರೀ ಜೆ. ರಾಜೇಂದ್ರ, ಮಾಜಿ ಪುರಸಭಾ ಅಧ್ಯಕ್ಷರು ಮತ್ತು ಶ್ರೀ ಎನ್. ರೇಣುಕ ಆಯುಕ್ತರು, ದೊಡ್ಡಬಳ್ಳಾಪುರ ನಗರಸಭೆ ಇವರು ಶಿಬಿರದ ಸ್ವಚ್ಛತೆಗಾಗಿ ಟ್ರಾಕ್ಟರ್‌ನೊಂದಿಗೆ ಸಿಬ್ಬಂದಿ ವರ್ಗದವರನ್ನು ಕಳುಹಿಸಿ ಸಹಾಯ ಮಾಡಿದರು. ಶ್ರೀ ಮಂಜುನಾಥ ಹೆಲ್ತ್ ಇನ್ಸ್‌ಪೆಕ್ಟರ್‌ರವರು ಶಿಬಿರಕ್ಕೆ ಭೇಟಿ ನೀಡಿದ್ದರು. ಶ್ರೀ ಎಲ್.ಟಿ. ಲೋಕೇಶ್ ಎ.ಎಸ್.ಓ.ಸಿ.(ಎಸ್) ಹಾಗೂ ತರಬೇತಿ ತಂಡದ ಸದಸ್ಯರುಗಳು ಸಹಾಯಕರಾಗಿದ್ದು ರಾಜ್ಯ ಸಂಘಟನಾ ಆಯುಕ್ತರುಗಳಾದ ಶ್ರೀ ನಾರಾಯಣಶೆಟ್ಟಿ ಮತ್ತು ಶ್ರೀಮತಿ ಜಾನಕಿ ವೇಣುಗೋಪಾಲ್‌ರವರು ಶಿಬಿರದ ಸಂಯೋಜಕರಾಗಿದ್ದರು.

# ಕೊಂಡಜ್ಜಿಯಲ್ಲಿ ರಾಷ್ಟ್ರಪತಿ
# ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಪೂರ್ವಭಾವಿ ತರಬೇತಿ ಶಿಬಿರ



ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪೂರ್ವಬಾವಿ ತರಬೇತಿ ಶಿಬಿರವು ಏಪ್ರಿಲ್ 26 ರಿಂದ 30ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ ಕೊಂಡಜ್ಜಿಯಲ್ಲಿ ಯಶಸ್ವಿಯಾಗಿ ಜರುಗಿತು, ರಾಜ್ಯದ 14 ಜಿಲ್ಲೆಗಳಿಂದ, 390 ಸ್ಕೌಟ್ಸ್, 43 ಸ್ಕೌಟರ್ಸ್, 15 ಸಿಬ್ಬಂದಿ ಹಾಗೂ ಗೈಡ್ ವಿಭಾಗದಲ್ಲಿ 200 ಗೈಡ್ಸ್ 50 ಗೈಡರ್ಸ್ ಹಾಗೂ ಸಿಬ್ಬಂದಿ ಒಟ್ಟು 698 ಭಾಗವಹಿಸಿದ್ದರು. ಶ್ರೀ ಬಿ.ಡಿ. ಫರ್ನಾಂಡೀಸ್ ಎ.ಎಲ್.ಟಿ. (ಸ್ಕೌಟ್) ಸ್ಕೌಟ್ ವಿಭಾಗಕ್ಕೆ ಶ್ರೀಮತಿ ಉಮಾ ಮರಿಗೆಂಚಣ್ಣವರ್ ಎ.ಎಲ್.ಟಿ. (ಗೈಡ್) ಇವರು ಗೈಡ್ ವಿಭಾಗಕ್ಕೆ ನಾಯಕರಾಗಿದ್ದರು. ದಿನಾಂಕ 27.04.2005ರಂದು ನಡೆದ ಉದ್ಘಾಟನಾ ಸಮಾರಂಭದಲ್ಲಿ ಜಿಲ್ಲಾ ಸಂಸ್ಥೆ ಅಧ್ಯಕ್ಷರಾದ ಶ್ರೀ ಅಥಣಿ ಕೊಟ್ರೇಶ್‌ರವರು ಮುಖ್ಯ ಅತಿಥಿಗಳಾಗಿ ಮಾತನಾಡುತ್ತಾ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿಯಿಂದ ಸ್ವಾವಲಂಬನೆ, ಉತ್ತಮ ನಾಗರೀಕರಾಗಲು ಸಾಧ್ಯ ಎಂದರು ಹಾಗೂ ದಾವಣಗೆರೆಯಲ್ಲಿ ಮುಂಬರುವ ಜುಲೈ-ಆಗಸ್ಟ್ ತಿಂಗಳಲ್ಲಿ 25ನೇ ಸ್ಕೌಟ್ ಮತ್ತು ಗೈಡ್ಸ್ ಜಾಂಬೋರೇಟ್ ನಡೆಸುವುದಾಗಿ ಭರವಸೆ ನೀಡಿದರು.

ಶ್ರೀ ಫೂಲ್‌ಚಂದ ಷಾ, ಉಪಾಧ್ಯಕ್ಷರು ರೆಡ್‌ಕ್ರಾಸ್ ಸಂಸ್ಥೆ ದಾವಣಗೆರೆ ಜಿಲ್ಲಾ ವಾರ್ತಾ ಮತ್ತು ಪ್ರಾಚಾರಾಧಿಕಾರಿ ಶ್ರೀ ಎಸ್. ಮಹೇಶ್ವರಯ್ಯರವರು ಮಾತನಾಡಿ ವಿದ್ಯಾರ್ಥಿಗಳಿಗೆ ಶಿಕ್ಷಣದ ಜೊತೆಗೆ ಶಿಸ್ತು ಭದ್ದ ಜೀವನಕ್ಕೆ ಸ್ಕೌಟ್ ಮತ್ತು ಗೈಡ್ಸ್ ಉತ್ತಮ ಚಳುವಳಿಯಾಗಿದೆ ಎಂದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಇನ್ನೆರಡು ವರ್ಷದಲ್ಲಿ ಶತಮಾನೋತ್ಸವ ಆಚರಿಸಲಿದೆ 216 ದೇಶದಲ್ಲಿ 2 ಕೋಟಿ 80 ಲಕ್ಷ ಸ್ಕೌಟ್ಸ್

ಗೈಡ್ಸ್‌ಗಳಿದ್ದಾರೆ. ಈ ವರ್ಷದಲ್ಲಿ 2 ಸಾವಿರ ಅಭ್ಯರ್ಥಿಗಳು ರಾಷ್ಟ್ರಪತಿ ಸ್ಕೌಟ್ಸ್ ಗೈಡ್ಸ್‌ಗಳಾಗಲು ಸಿದ್ಧತೆ ನಡೆಸಿದ್ದಾರೆ ಎಂದರು. ಹಾಗೂ ರಾಜ್ಯದ 202 ಕ್ಷೇತ್ರ ಶಿಕ್ಷಣ ಬ್ಲಾಕ್‌ನ ತಲಾ 25 ಸ್ಕೌಟ್ಸ್, 25 ಗೈಡ್ಸ್‌ಗಳಿಗೆ ಸಮವಸ್ತ್ರ ನೀಡಲು 25 ಲಕ್ಷ ರೂ. ಅನುದಾನಕ್ಕೆ ಸಾರ್ವಜನಿಕ ಶಿಕ್ಷಣ ಇಲಾಖೆ ಮಂಜೂರು ಮಾಡಿದ್ದು ಈ ಹಣದಡಿ ಸುಮಾರು 10,100 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಬರುವ ಜೂನ್‌ನಲ್ಲಿ ಸಮವಸ್ತ್ರದ ಲಾಭ ಪಡೆಯುವರು ಎಂದರು ಹಾಗೂ 25ನೇ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟನ್ನು ದಾವಣಗೆರೆಯಲ್ಲಿ ಮುಂಬರುವ ತಿಂಗಳಲ್ಲಿ ನಡೆಸಲು ಸರ್ಕಾರ 10 ಲಕ್ಷ ರೂ. ಅನುದಾನ ಬಿಡುಗಡೆ ಮಾಡಿದೆ ಎಂದರು.

ಸಮಾರಂಭದಲ್ಲಿ ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಎಂ.ಎ. ಚೆಲ್ಲಯ್ಯ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಹಾಜರಿದ್ದರು ಕೇಂದ್ರ ಸಾನ್ನಿಕ ಆಯುಕ್ತರಾದ ಶ್ರೀ ಮಹಮದ್ ವಾಸಿಲ್‌ರವರು ಎಲ್ಲರನ್ನು ಸ್ವಾಗತಿಸಿದರು. ರಾಜ್ಯ ಸಂಘಟನಾ ಆಯುಕ್ತರುಗಳಾದ ಶ್ರೀ ನಾರಾಯಣ ಶೆಟ್ಟಿ ಮತ್ತು ಶ್ರೀಮತಿ ಜಾನಕಿ ವೇಣುಗೋಪಾಲ್ ಶಿಬಿರದ ಸಂಯೋಜಿಸಿರಾಗಿದ್ದರು. ರಾಷ್ಟ್ರಪತಿ ಪದಕ ಪಡೆಯಲು ಬೇಕಾದ ಎಲ್ಲಾ ತರಬೇತಿಯನ್ನು ನೀಡಲಾಯಿತು. ಶ್ರೀ ಟಿ.ಎ. ಮುಂಜುನಾಥಾಚಾರ್ ಎ.ಎಸ್.ಓ.ಸಿ.(ಎಸ್) ಮತ್ತು ಶ್ರೀ ನಾಗೇಶ್ ಆರ್. ಶಿವಪುರ ಎ.ಎಸ್.ಓ.ಸಿ.(ಎಸ್) ಇವರುಗಳು ಸಹಾಯಕರಾಗಿದ್ದರು.

## ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪೂರ್ವಬಾವಿ ಸಿದ್ಧತಾ ಶಿಬಿರ

ರಾಷ್ಟ್ರಪತಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪೂರ್ವಬಾವಿ ತರಬೇತಿ ಶಿಬಿರವು ದಿನಾಂಕ 03.05.2005 ರಿಂದ 07.05.2005ರ ವರೆಗೆ ಎಂ.ಆರ್.ಪಿ.ಎಲ್. ಶಾಲೆ ಸರತ್ಕಲ್‌ನಲ್ಲಿ ಯಶಸ್ವಿಯಾಗಿ ಜರುಗಿತು. ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಯಿಂದ 183 ಗೈಡ್ಸ್‌ಗಳು 73 ಸ್ಕೌಟ್ಸ್‌ಗಳು ಈ ಶಿಬಿರದಲ್ಲಿ ಭಾಗವಹಿಸಿದ್ದರು.

ಶ್ರೀ ಆನಂದ ಅಡಿಗ ಎಲ್.ಟಿ.(ಎಸ್), ಸ್ಕೌಟ್ ವಿಭಾಗಕ್ಕೆ ಶ್ರೀಮತಿ ಕೆ.ಕೆ. ಲೀಲಾ ಎಲ್.ಟಿ.(ಜಿ) ಗೈಡ್ ವಿಭಾಗಕ್ಕೆ ನಾಯಕರಾಗಿದ್ದರು. ರಾಜ್ಯ ಸಂಘಟನಾ ಆಯುಕ್ತರುಗಳಾದ ಶ್ರೀ ನಾರಾಯಣಶೆಟ್ಟಿ ಮತ್ತು ಶ್ರೀಮತಿ ಜಾನಕಿ ವೇಣುಗೋಪಾಲ್‌ರವರು ಶಿಬಿರದ ಸಂಯೋಜಕರಾಗಿದ್ದರು. ರಾಷ್ಟ್ರಪತಿ ಪದಕ ಪಡೆಯಲು ಬೇಕಾದ ಎಲ್ಲಾ ವಿಷಯಗಳನ್ನು ಬೋಧಿಸಲಾಯಿತು. ಶಿಬಿರಾಗ್ನಿ, ಸರ್ವಧರ್ಮ ಪ್ರಾರ್ಥನೆ ಧ್ವಜಾರೋಹಣ, ಅಗ್ನಿಶಾಮಕ ದಳದವರಿಂದ ಬೆಂಕಿ ಆರಿಸುವ ವಿಧಾನ ಹಾಗೂ ಸ್ವಚ್ಛತಾ ಕಾರ್ಯಕ್ರಮವನ್ನು ಹಮ್ಮಿಕ್ಕೊಳ್ಳಲಾಗಿತ್ತು.

ದಿನಾಂಕ 06.05.-2005 ರಂದು ಸಂಜೆ ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ.ಎ. ಕೈರನ್ನನವರು ವಹಿಸಿದ್ದು ಎಂ.ಆರ್.ಪಿ.ಎಲ್. ಶಾಲೆಯ ಅಧ್ಯಾಪಕರಾದ ಶ್ರೀ ಸತೀಶ್‌ಕುಮಾರ್, ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಐರಿನ್ ಡಿ'ಕುನ್ಹ ಜಿಲ್ಲಾ ಕಾರ್ಯದರ್ಶಿ ಶ್ರೀರಾಮಶೇಷ ಶೆಟ್ಟಿ ಸುಫಲ ಮತ್ತು ರಾಜ್ಯ ಸಂಘಟನಾ ಆಯುಕ್ತರುಗಳು ಉಪಸ್ಥಿತರಿದ್ದರು. ದಿನಾಂಕ 07.05.2005 ರಂದು ಶಿಬಿರ ಮುಕ್ತಾಯಗೊಂಡಿತು.

ಚಿಂತನ



# ಸಂಘಜೀವನ

- ಗೊ.ರು. ಚನ್ನಬಸಪ್ಪ

"ಉದಯ ಮಧ್ಯಾಹ್ನ ಅಸ್ತಮಯ ಕತ್ತಲೆ ಬೆಳಗು ದಿನ ವಾರ ಲಗ್ನ ತಿಥಿ ಮಾಸ ಸಂವತ್ಸರ ಹೋಗುತ್ತ ಬರುತ್ತಲಿವೆ. ಇದ ನೋಡಿದವರೆಲ್ಲ ಇದರೊಳಗೆ ಹೋಗುತ್ತ ಬರುತ್ತ ಇದ್ದಾರೆ. ಜಗಕ್ಕೆ ಇದೀಗ ಇಷ್ಟವಾಗಿಪ್ಪವು. ಎನ್ನ ದೇವರಿಗೆ ಇವೊಂದು ಇಲ್ಲ. ದಿನ - ಕಾಲ, ಯುಗ - ಜುಗ ಪ್ರಳಯಕ್ಕೆ ಹೊರಗಾದ ದೇವನ ಅಂಗವಿಸಿ ಮುಟ್ಟಿ ಹಿಡಿದ ಕಾರಣ ಎಮ್ಮ ಶರಣರು ಪ್ರಳಯಕ್ಕೆ ಹೊರಗಾದರು. ಇದನರಿದು ಅಂತಪ್ಪ ಶರಣರ ನಂಬಿ ಕೆಟ್ಟು ಬಟ್ಟ ಬಯಲಾದೆನಯ್ಯಾ ಬಸವಪ್ರಿಯ ಕೂಡಲ ಚೆನ್ನಬಸವಣ್ಣಾ".

ಇದು ಹನ್ನೆರಡನೆಯ ಶತಮಾನದಲ್ಲಿ ಆಗಿಹೋದ, ಆದರೆ ವಚನ ಸಾಹಿತ್ಯ ರೂಪದಲ್ಲಿ ಇನ್ನೂ ಜೀವಂತವಾಗಿರುವ ಶರಣ ಹಡಪದಪ್ಪಣ್ಣನ ಅನುಭಾವದ ನುಡಿ. ಸಜ್ಜನ ಸಂಗ ಅಥವಾ ಶರಣಗೋಷ್ಠಿಯ ಪ್ರಭಾವದಿಂದ ಸಾಮಾನ್ಯ ವ್ಯಕ್ತಿಯೂ ಹೇಗೆ ಶ್ರೇಷ್ಠ ಶಕ್ತಿಯಾಗಬಲ್ಲ ಎಂಬುದಕ್ಕೆ ಹಿಡಿದ ಕನ್ನಡಿಯಂತಿದೆ ಈ ವಚನ.

ಹಡದಪ್ಪಣ್ಣ ಸಮಾಜದ ಸಾಮಾನ್ಯ ದೃಷ್ಟಿಯಲ್ಲಿ ಓರ್ವ ಎಲೆ ಅಡಿಕೆ ಒದಗಿಸುವ ಕಾಯಕದವನು. ಅವನದು ಹೊಟ್ಟೆಯಪಾಡಿನ ಕಾಯಕ. ಆದರೆ ಶರಣರ ಸಹಯೋಗ ಅವನನ್ನು ಹಿರಿಯ ಅನುಭಾವಿಗಳ ಸಾಲಿಗೆ ಸೇರಿಸಿದೆ. ಬೆಂಕಿಯ ಸಂಗದಿಂದ ಕಟ್ಟಿಗೆ ಸುಟ್ಟು ಹೋಗುತ್ತದೆ. ಬೆಳಗಿನ ಸಂಪರ್ಕದಿಂದ ಕತ್ತಲೆಯ ಹುಟ್ಟಡಗುತ್ತದೆ. ಅಂತೆಯೇ ಸತ್ಸಹವಾಸ ಅಥವಾ ಸಜ್ಜನ ಸಂಗದಿಂದ ನಡೆ ನುಡಿಗಳು ಶುದ್ಧವಾಗುತ್ತವೆ; ಸಂಸ್ಕಾರಗೊಳ್ಳುತ್ತವೆ. ಏಕೆಂದರೆ, ಸಜ್ಜನರಿಗೆ ಅಥವಾ ಶರಣರಿಗೆ ಅಂಗದ ಕಳವಳವಿರುವುದಿಲ್ಲ. ಮನಸ್ಸಿನಲ್ಲಿ ಚಾಂಚಲ್ಯವಿರುವುದಿಲ್ಲ. ಭಾವದ ಭ್ರಾಂತಿಯಾಗಲೀ, ಅರುಹಿನ ಮರಹಾಗಲೀ ಅವರ ಬಳಿ ಸುಳಿಯುವುದಿಲ್ಲ.

ಸಜ್ಜನರ ವಿಚಾರ ಅಭಿನ್ನವಾದದ್ದು; ಸ್ಥಾನಮಾನಗಳ ಬಗ್ಗೆ ಅವರಿಗೆ ಲಕ್ಷ್ಯವಿರುವುದಿಲ್ಲ. ಅವರು ಇಹ - ಪರಗಳ ಚಿಂತೆಮಾಡುವುದಿಲ್ಲ. ಇಂದ್ರಿಯಗಳ ಇಚ್ಛೆ, ತಾಪತ್ರಯಗಳ ಬಂಧನ - ಇವುಗಳಿಗೆ ಸಿಲುಕದ ಸಹಜಯೋಗ ಅವರದು. ಅವರ ಸಹಯೋಗ ಪರಿಶುದ್ಧ ವಾಯು ಸೇವನೆಯಷ್ಟೇ ಆಹ್ಲಾದಕಾರಿ.

ಸಮಾಜದಲ್ಲಿ ನಮ್ಮ ಸ್ಥಾನಮಾನಗಳು ನಿಗದಿಯಾಗುವುದು ಬಹುಮಟ್ಟಿಗೆ ನಮ್ಮ ಸಂಗ - ಸಹವಾಸಗಳಿಂದ. ಮನುಷ್ಯ ಸಂಘ ಜೀವಿ. ಸ್ವಭಾವತಃ ಒಂಟಿತನ ಅವನಿಗೆ ಇಷ್ಟವಾಗದ ಸ್ಥಿತಿ. ಆದುದರಿಂದಲೇ ಅವನು ಮನೆಯ ಒಳಗಿರಲಿ, ಹೊರಗಿರಲಿ ಸಹವಾಸ ಬಯಸುತ್ತಾನೆ. ಮನೆಯಲ್ಲಿ ತಾಯಿ - ತಂದೆಗಳೋ, ಅಣ್ಣ - ತಮ್ಮಂದಿರೋ, ಹೆಂಡಿರು ಮಕ್ಕಳೋ ಜೊತೆಗಿದ್ದರೆ, ಮನೆಯ ಹೊರಗೆ ಬಂಧು - ಬಳಗವೋ, ಇಷ್ಟಮಿತ್ರರೋ ಇರಬೇಕು. ಸಹವಾಸವಿಲ್ಲದಿದ್ದರೆ ಬದುಕು ನೀರಸವಾಗುತ್ತದೆ ಮಾತ್ರವಲ್ಲ, ನಿರರ್ಥಕವೂ ಆಗುತ್ತದೆ.

ವಾಸ್ತವವಾಗಿ, ನಮ್ಮ ಬದುಕು ಸಾರ್ಥಕಗೊಳ್ಳುವುದೇ ಸಂಘ ಜೀವನದಿಂದ. ಆದರೆ ಆ ಸಂಗ ಅಥವಾ ಸಹವಾಸ ಎಂತಹುದಿರಬೇಕು? ಅದೇ ಅನುಭಾವಿಗಳು ಹೇಳುವ ಸಜ್ಜನರ ಸಂಗ. ಅದು ಹೊರತಾಗಿ ದುರಾಚಾರಿಗಳು. ಸುರಾಪಾನಿಗಳು, ಜಾರ ಚೋರರು ಇಂತಹ ದುರ್ಜನರ ಸಹವಾಸ ಮಾಡಿದರೆ ಪರಿಣಾಮವೇನೆಂದು ಬೇರೆ ಹೇಳಬೇಕಾಗಿಲ್ಲ.

ದುರ್ಜನರ ನಡೆ - ನುಡಿಗಳು ಭಿನ್ನ. ಅವರು ಮೈ ಮನಗಳು ಭಿನ್ನ. ಅವರು ತಮ್ಮ ಸಂಪರ್ಕಕ್ಕೆ ಬಂದವರನ್ನು ಸೋಗು ಹಾಕಿ ಸುಲಿಯುತ್ತಾರೆ, ಬೆದರಿಕೆ ಹಾಕಿ ಬೆತ್ತಲೆ ಮಾಡುತ್ತಾರೆ. ಒಮ್ಮೆ ಅವರ ಸಂಗಕ್ಕೆ ಸಿಕ್ಕಿದೆವೆಂದರೆ ನಾವು ಭಯ ಮತ್ತು ಹಿಂಸೆಗಳ ಹುತ್ತವಾಗಿಬಿಡುತ್ತೇವೆ. ಸಭ್ಯತೆ ಸಜ್ಜನಿಕೆಗಳು ನಮ್ಮಿಂದ ದೂರವಾಗಿ ಬಿಡುತ್ತವೆ. ಮೃಗ ಲಕ್ಷಣಗಳೆಲ್ಲ ಮೈಗೂಡಿಕೊಳ್ಳುತ್ತವೆ.

ಆದುದರಿಂದ ಸಹವಾಸ ಅಥವಾ ಸಂಘ ವ್ಯಕ್ತಿಯ ಅಪೇಕ್ಷೆಯಷ್ಟೇ ಆದರೆ ಸಾಲದು; ಆಯ್ಕೆಯೂ ಆಗಬೇಕು. ಮನ, ಬುದ್ಧಿ, ಶೀಲ, ಭಾವಗಳಲ್ಲಿ ಸಮರಸವಾಗುವಂತಹ ವ್ಯಕ್ತಿಗಳ ಸಂಗವನ್ನೇ ಮಾಡಬೇಕು. ಅಂತರಂಗ ಶುದ್ಧವಿಲ್ಲದವರ ಸಂಗ ಸಂಕಟದ ನಂಜು; ದುರ್ಜನರ ಸಂಗ ದೋಷದ ದಳ್ಳುರಿ. 'ನೆರೆ ನೋಡಿ ನೆಂಟಸ್ತಿಕೆ ಮಾಡು' ಎಂಬ ಗಾದೆ ಮಾತೇ ಇದೆ. ನಮ್ಮ ಘನತೆ ಗೌರವಗಳು ಮತ್ತು ಸ್ಥಾನ ಮಾನಗಳಿಗೆ ನಮ್ಮ ಒಡನಾಟವೂ ಒಂದು ಅಳತೆಗೋಲೆಂಬುದನ್ನು ಮರೆಯಬಾರದು.

ನಾವು ನಿತ್ಯದ ಸಂಗ ಮಾಡಬೇಕು; ಸತ್ಯದ ಒಡನಾಟ ನಮಗೆ ಬೇಕು. ನಮ್ಮ ಸಹಯೋಗ ಸದ್ವಿಚಾರಿಗಳೊಡನೆ, ಸದಾಚಾರಿಗಳೊಡನೆ ಇರಬೇಕು. ಅಂತಹ ಸಹಯೋಗದಿಂದ ನಾವೂ ನಿತ್ಯರಾಗುತ್ತೇವೆ; ಸತ್ಯರಾಗುತ್ತೇವೆ. ನಮ್ಮದೂ ಸದ್ವಿಚಾರವಾಗುತ್ತದೆ; ನಮ್ಮ ನಡತೆಯೂ ಸದಾಚಾರವಾಗುತ್ತದೆ. ದುಷ್ಟರ ಒಡನಾಟ ನಮ್ಮನ್ನು ದುಃಖದ ಮಡಿಲಿಗೆ ತಳ್ಳಿದರೆ, ಸಭ್ಯರ ಒಡನಾಟ ಸಂತೋಷದ ಸುಳಿಗಾಳಿಯಲ್ಲಿ ನಲಿದಾಡಿಸುತ್ತದೆ.

(ಶ್ರೀ ಗೊ.ರು.ಚ. ಅವರ ಪ್ರಕಟಿತ ಚಿತಂನೆಗಳ ಕೃತಿ "ಕಂತೆ ಭಿಕ್ಷೆ" ದಿಂದ ಆರಿಸಲಾಗಿದೆ.)

# ಜಿಲ್ಲಾ ವಾರ್ತೆ



## ಚಿತ್ರದುರ್ಗ ಜಿಲ್ಲೆ :

ಬೆಂಗಳೂರು ವಿಭಾಗ ಮಟ್ಟದ ಜಿಲ್ಲಾ ಆಯುಕ್ತರುಗಳು, ಸಹಾಯಕ ಆಯುಕ್ತರುಗಳು, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳು ಮತ್ತು ಖಜಾಂಚಿ ಗಳ ಹಾಗೂ ಚಿತ್ರದುರ್ಗ, ದಾವಣಗೆರೆ, ಶಿವಮೊಗ್ಗ, ಹಾವೇರಿ ಜಿಲ್ಲೆಗಳ ರಾಜ್ಯ ಸಂಸ್ಥೆ ಅಜೀವ ಸದಸ್ಯರುಗಳ ಸಮಾವೇಶವನ್ನು ದಿನಾಂಕ 28-03-2005ರಂದು ಚಿತ್ರದುರ್ಗ ನಗರದ ಪಂಚಾಚಾರ್ಯ ಕಲ್ಯಾಣ ಮಂಟಪದಲ್ಲಿ ಏರ್ಪಡಿಸಲಾಗಿದ್ದು, ಸದರಿ ಸಮಾರಂಭದ ಅಧ್ಯಕ್ಷತೆಯನ್ನು ಚಿತ್ರದುರ್ಗ ವಿಧಾನಸಭೆ ಕ್ಷೇತ್ರದ ಶಾಸಕರಾದ ಮಾನ್ಯ ಶ್ರೀ ಬಿ.ಹೆಚ್. ತಿಪ್ಪಾರೆಡ್ಡಿಯವರು ವಹಿಸಿದ್ದರು. ಉದ್ಘಾಟನೆಯನ್ನು ಶ್ರೀ ಎಸ್.ಆರ್.



ಉಮಾಶಂಕರ್ ಭಾ.ಆ.ಸೇ., ಮಾನ್ಯ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ ಚಿತ್ರದುರ್ಗ ಇವರು ನೆರವೇರಿಸಿದರು. ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಸೇತುರಾಂ, ಅಧ್ಯಕ್ಷರು ನಗರಾಭಿವೃದ್ಧಿ ಪ್ರಾಧಿಕಾರ, ಚಿತ್ರದುರ್ಗ ಶ್ರೀ ಸಿ.ಆರ್. ಮೊಹಮ್ಮದ್ ಜಹೀರುದ್ದೀನ್, ರಾಜ್ಯ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಎಂ.ಜಿ. ಬೋಪಯ್ಯ, ರಾಜ್ಯ ಆಯುಕ್ತರು (ಗೈಡ್ಸ್), ಶ್ರೀಮತಿ ಎಂ. ಶಾಂತಿಮತಿ ಜಂಟಿ ರಾಜ್ಯ ಕಾರ್ಯದರ್ಶಿ (ಗೈಡ್ಸ್) ಶ್ರೀ ಎಲ್. ರಂಗಪ್ಪ, ಉಪನಿರ್ದೇಶಕರು ಹಾಗೂ ಜಿಲ್ಲಾ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಚಿತ್ರದುರ್ಗ ಇವರುಗಳು ಭಾಗವಹಿಸಿದ್ದರು. ಸದರಿ ಸಮಾವೇಶದಲ್ಲಿ 65 ಸ್ಕೌಟ್-ಗೈಡ್ ನಾಯಕರುಗಳು ಭಾಗವಹಿಸಿದ್ದರು, ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಮೊಹಮ್ಮದ್ ವಾಸಿಲ್, ರಾಜ್ಯ ಕೇಂದ್ರ ಸ್ಥಾನಿಕ ಆಯುಕ್ತರು, ಶ್ರೀ ನಾರಾಯಣಶೆಟ್ಟಿ, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಶ್ರೀಮತಿ ಜಾನಕಿ ವೇಣುಗೋಪಾಲ್, ರಾಜ್ಯ ಸಂಘಟನಾ ಆಯುಕ್ತರು (ಗೈಡ್ಸ್) ಇವರುಗಳು ಪಾಲ್ಗೊಂಡಿದ್ದರು. ಸಮ್ಮೇಳನದಲ್ಲಿ ರಾಜ್ಯ ತರಬೇತಿ ಆಯುಕ್ತ ಶ್ರೀ ಮಾಧವ್‌ಸಿಂಗ್ ಹಾಗೂ ನಗರದ ಉದ್ಯಮಿಯಾದ ಶ್ರೀ ಎಂ.ಕೆ. ತಾಜ್‌ಪೀರ್ ಇವರುಗಳು ಭಾಗವಹಿಸಿದ್ದರು.

ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀಮತಿ ಸುಜಯ ಪ್ರಕಾಶ್, ಮಾಜಿ ಜಿಲ್ಲಾ (ಗೈಡ್ಸ್) ಆಯುಕ್ತರಾದ ಶ್ರೀಮತಿ ಗಿರಿಜಮ್ಮ ರುದ್ರಯ್ಯ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀ ಎಂ.ಆರ್. ನಾರಾಯಣಪ್ಪ, ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀಮತಿ ಹೇಮಂತಿನಿ ಪ್ರಕಾಶ್, ಜಿಲ್ಲಾ ಖಜಾಂಚಿಗಳಾದ ಶ್ರೀ ಕೆ. ಶ್ರೀನಿವಾಸಶೆಟ್ಟಿ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಸಿ.ಆರ್. ಮೊಹಮ್ಮದ್ ಮೊಯಿನುದ್ದೀನ್ ಜಂಟಿ ಕಾರ್ಯದರ್ಶಿ ಶ್ರೀಮತಿ ನಾಗರತ್ನ, ಗೈಡ್ ವಿಭಾಗದ ಸಹಾಯಕ ಆಯುಕ್ತರುಗಳು ಹಾಗೂ ಇತರೆ ಎಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

## ದಕ್ಷಿಣ ಕನ್ನಡ ಜಿಲ್ಲೆ :

**ರಾಜ್ಯ ಪುರಸ್ಕಾರ ಸ್ಕೌಟ್ಸ್ ಗೈಡ್ಸ್ ಪ್ರಶಸ್ತಿ ಪ್ರಧಾನ ಸಮಾರಂಭ :** ಭಾರತ್ ಸ್ಕೌಟ್ಸ್ ಗೈಡ್ಸ್ ಚಟುವಟಿಕೆಗಳು ವಿದ್ಯಾರ್ಥಿಗಳ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾಗಿದೆ. ಬಿಡುವಿನ ಸಮಯದಲ್ಲಿ ಸ್ಕೌಟ್ಸ್ ಗೈಡ್ಸ್ ಚಟುವಟಿಕೆಗಳಾದ ಹೊರಸಂಚಾರ, ಶಿಬಿರವಾಸ, ಸಮಾಜ ಸೇವಾ ಕಾರ್ಯಕ್ರಮಗಳಲ್ಲಿ ವಿದ್ಯಾರ್ಥಿಗಳು ಭಾಗವಹಿಸುವುದರಿಂದ ಉತ್ತಮ ನಾಗರಿಕರಾಗಬಹುದು ಎಂದು ಬಂಟ್ವಾಳ ಕ್ಷೇತ್ರದ ಶಾಸಕರು ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಬಿ. ನಾಗರಾಜ ಶೆಟ್ಟಿಯವರು ತಿಳಿಸಿದರು. ಅವರು ಭಾರತ್ ಸ್ಕೌಟ್ಸ್ ಗೈಡ್ಸ್ ಜಿಲ್ಲಾ ಸಂಸ್ಥೆಯಲ್ಲಿ ಜರುಗಿದ ರಾಜ್ಯ ಪುರಸ್ಕಾರ ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಶಸ್ತಿ ಪ್ರಧಾನ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಪ್ರಶಸ್ತಿ ಪತ್ರಗಳನ್ನು ವಿತರಿಸಿ ಮಾತನಾಡಿದರು.

2004-2005ನೇ ಸಾಲಿನಲ್ಲಿ ಕರ್ನಾಟಕ ರಾಜ್ಯದ ರಾಜ್ಯಪಾಲರು ನೀಡಿರುವ ರಾಜ್ಯ ಪುರಸ್ಕಾರ ಸ್ಕೌಟ್ಸ್-ಗೈಡ್ಸ್ ಪ್ರಶಸ್ತಿ ಪತ್ರ, ಚತುರ್ಥ ಚರಣ ಕಬ್ಸ್, ಹೀರಕ್ ಪಂಕ್ ಬುಲ್ ಬುಲ್ಸ್ ಪ್ರಶಸ್ತಿ ಪತ್ರ ಹಾಗೂ ರಾಷ್ಟ್ರ ಸಂಸ್ಥೆಯಿಂದ ನೀಡಿರುವ ಗೋಲ್ಡನ್ ಆ್ಯರೋ ಕಬ್ಸ್, ಬುಲ್‌ಬುಲ್ಸ್ ಪ್ರಶಸ್ತಿ ಪತ್ರಗಳನ್ನು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಭವನ, ಮಂಗಳೂರು ಇಲ್ಲಿ ವಿತರಿಸಲಾಯಿತು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ.ಎ. ಕೈರನ್ನ ಅಧ್ಯಕ್ಷತೆ ವಹಿಸಿದ್ದರು ಶ್ರೀ ರಾಜೇಶ್ ನಾಯಕ್, ಜಿಲ್ಲಾ ಕಾರ್ಯದರ್ಶಿ ಶ್ರೀರಾಮಶೇಷ ಶೆಟ್ಟಿ, ಸಹಾಯ ಜಿಲ್ಲಾ ಆಯುಕ್ತೆ (ಗೈಡ್ಸ್) ಶ್ರೀಮತಿ ಜಾಯ್ಸಿ ಅಲ್ಬುಕರ್ಕ್ ವೇದಿಕೆಯಲ್ಲಿ ಉಪಸ್ಥಿತರಿದರು.



**ಸ್ಕೌಟ್, ಗೈಡ್, ಕಬ್ ಬುಲ್‌ಬುಲ್ ಶಿಕ್ಷಕ / ಶಿಕ್ಷಕಿಯರ ಪ್ರಾಥಮಿಕ ಹಾಗೂ ಮುಂದುವರಿದ ತರಬೇತಿ ಶಿಬಿರ** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯಲ್ಲಿ ಜಿಲ್ಲಾ ಶಿಕ್ಷಣ ಹಾಗೂ ತರಬೇತಿ ಸಂಸ್ಥೆಯ ಸಹಯೋಗದೊಂದಿಗೆ ದಿನಾಂಕ 11.04.2005 ರಿಂದ 20.04.2005ರ ವರೆಗೆ ಕಬ್ ಹಾಗೂ ಸ್ಕೌಟ್ ಶಿಬಿರಗಳು ಹಾಗೂ ದಿನಾಂಕ : 21.04.2005 ರಿಂದ 30.04.2005ರ ವರೆಗೆ ಬುಲ್‌ಬುಲ್ ಹಾಗೂ ಗೈಡ್ಸ್ ವಿಭಾಗದ ತರಬೇತಿ ಶಿಬಿರಗಳು ಜರುಗಿತು. ಶಿಬಿರದ ನಾಯಕರುಗಳಾಗಿ ಕು॥ ಜುಲಿಯಾನ ಲಸ್ರಾಡೋ, ಶ್ರೀ ರಾಜಗೋಪಾಲ್ ಆಚಾರ್, ಶ್ರೀ ಪ್ರತಿಮ್‌ಕುಮಾರ್, ಶ್ರೀಮತಿ ಸುನೀತ, ಶ್ರೀಮತಿ ಸುಪಲಾ, ಶ್ರೀಮತಿ ವಿಮಲ, ಸಿಸ್ಟರ್ ಲೇರಿನಾ, ಕಾರ್ಯನಿರ್ವಹಿಸಿದರು.

**ಉದ್ಘಾಟನಾ ಸಮಾರಂಭ :** ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಹಾಗೂ ಮಾಜಿ ಶಾಸಕ ಶ್ರೀ ಸೋಮಪ್ಪ ಸುವರ್ಣರವರ ಅಧ್ಯಕ್ಷತೆಯಲ್ಲಿ ಶಿಕ್ಷಣ ಹಾಗೂ ತರಬೇತಿ ಕೇಂದ್ರ ಪ್ರಾಂಶುಪಾಲೆ ಡಾ॥ ದಯಾನಾ ಪ್ರಭುರವರು ದೀಪ ಬೆಳಗಿಸಿ ಉದ್ಘಾಟಿಸಿದರು. ವೇದಿಕೆಯಲ್ಲಿ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಬಿ.ಎಂ. ತುಂಬೆ (ಸ್ಕೌಟ್) ಕಾರ್ಯಕ್ರಮ ನಿರ್ವಹಿಸಿದರು.



**ಸಮಾರೋಪ ಸಮಾರಂಭ :** ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ.ವಿ. ಕೈರನ್ನರವರು ಅಧ್ಯಕ್ಷತೆಯಲ್ಲಿ ನಡೆಯಿತು. ಮುಖ್ಯ ಅತಿಥಿಗಳಾಗಿ ಜಿಲ್ಲಾ ವಿದ್ಯಾಂಗ ಉಪನಿರ್ದೇಶಕರಾದ ಶ್ರೀಮತಿ ಫಿಲೋಮಿನಾ ಲೋಬೋ, ಜಿಲ್ಲಾ ಆಯುಕ್ತೆ ಶ್ರೀಮತಿ ಐರಿನ್ ಡಿ'ಕುನ್ನ ಹಾಗೂ ಪದಾಧಿಕಾರಿಗಳು ಮತ್ತು ಸ್ಕೌಟ್ಸ್ ಗೈಡ್ ಅಭಿಮಾನಿಗಳು ಭಾಗವಹಿಸಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ರಾಮಶೇಷಶೆಟ್ಟಿ ಸ್ವಾಗತಿಸಿದರು, ರಾಜ್ಯ ಸಹ ಸಂಘಟನ ಆಯುಕ್ತರಾದ ಶ್ರೀ ಎಂ. ಪ್ರಭಾಕರ್ ಭಟ್ ಧನ್ಯವಾದಗೈದರು. ಜಿಲ್ಲಾ ತರಬೇತಿ ಆಯುಕ್ತಿ (ಗೈಡ್) ಶ್ರೀಮತಿ ಸುಫಲ ಕಾರ್ಯಕ್ರಮ ನಿರ್ವಹಿಸಿದರು.

## ಗದಗ ಜಿಲ್ಲೆ :

ದಿನಾಂಕ 18.04.2005ರಂದು ಗದಗ ಜಿಲ್ಲಾ ಸ್ಕೌಟ್ ಗೈಡ್ ಸಂಸ್ಥೆ ವತಿಯಿಂದ ಜಿಲ್ಲಾ ಸ್ಕೌಟ್ ಮತ್ತು ಗೈಡ್ಸ್‌ಗಳಿಗೆ ಪರೀಕ್ಷಾ ಶಿಬಿರ ಜರುಗಿತು. ದ್ವಿತೀಯ ಸೋಪಾನದವರೆಗೆ ಪರೀಕ್ಷೆ ಮಾಡಲಾಯಿತು ಸ್ಕೌಟ್ಸ್-125, ಗೈಡ್ಸ್-88, ಬುಲ್‌ಬುಲ್-15 ಒಟ್ಟು 228 ಸ್ಕೌಟ್-ಗೈಡ್‌ಗಳು ಭಾಗಿಗಳಾಗಿದ್ದರು. ಶ್ರೀ ಬಿ.ಎ. ವಸ್ತ್ರದ ಜಿಲ್ಲಾ ಸಂಘಟನಾಯುಕ್ತರು



ಸ್ಕೌಟ್ ಶಿಬಿರದ ನಾಯಕರ ಕಾರ್ಯನಿರ್ವಹಿಸಿದರು.

ಗದಗ್ ಜಿಲ್ಲಾಧಿಕಾರಿಗಳೂ ಹಾಗೂ ಸಂಸ್ಥೆಯ ಅಧ್ಯಕ್ಷರು ಸಹಿ ಮಾಡಿದ ಪ್ರಶಸ್ತಿ ಪತ್ರಗಳನ್ನು ಸಾಯಂಕಾಲ ಜರುಗಿದ ಸಮಾರಂಭದಲ್ಲಿ ವಿತರಿಸಲಾಯಿತು. ಶ್ರೀ ಎ.ಎನ್. ನಾಗರಳ್ಳಿ, ಜಿಲ್ಲಾ ಸ್ಕೌಟ್ ಮುಖ್ಯ ಆಯುಕ್ತರು ಹಾಗು ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಅಧ್ಯಕ್ಷತೆ ವಹಿಸಿದ್ದರು. ಸಮಾರಂಭದಲ್ಲಿ ಶ್ರೀ ಡಿ.ವ್ಹಿ. ಬೆಲ್ಲದ ಜಿಲ್ಲಾ ಸ್ಥಾನಿಕ ಆಯುಕ್ತರು (ಸ್ಕೌಟ್), ಶ್ರೀ ಬಾರಾಟಕ್ಕೆ ಎ.ಡಿ.ಸಿ. ಸ್ಕೌಟ್ ಭಾಗವಹಿಸಿದ್ದರು.

## ದಾವಣಗೆರೆ ಜಿಲ್ಲೆ :

ದಾವಣಗೆರೆ ಜಿಲ್ಲೆಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ತೋಳಹುಣಸೆಯಲ್ಲಿ ದಿನಾಂಕ 21.03.2005 ರಂದು ಕಲ್ಪನಾ ಚಾವ್ಲ ಗೈಡ್ ಕಂಪನಿಯ ಉದ್ಘಾಟನಾ ಸಮಾರಂಭವು ಅತ್ಯಂತ ಸಡಗರ ಸಂಭ್ರಮದಿಂದ ಜರುಗಿತು. ಶಿಕ್ಷಣ ಇಲಾಖೆ ಉಪನಿರ್ದೇಶಕರಾದ ಶ್ರೀ ಶಾಂತರಾಜು, ಶ್ರೀ ಅಥಣಿ ಕೊಟ್ರೇಶ್ ಜಿಲ್ಲಾ ಅಧ್ಯಕ್ಷರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಶ್ರೀ ವೈ. ಚನ್ನಬಸಪ್ಪ, ಜಿಲ್ಲಾ ಕಾರ್ಯದರ್ಶಿ, ಶ್ರೀ ಶಂಕರ್ ನಾಯಕ್ ಜಿಲ್ಲಾ ತರಬೇತಿ ಆಯುಕ್ತರು ಕಾರ್ಯಕ್ರಮವನ್ನು ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು.





ಶ್ರೀ ಅಥಣಿ ಕೊಟ್ರೇಶ್ ಅಧ್ಯಕ್ಷರು ಇವರು ಮಕ್ಕಳಿಗೆ ಕೊಡುಗೆಯೊಂದಿಗೆ ಸಮವಸ್ತ್ರಗಳನ್ನು ನೀಡಿದರು. ಶ್ರೀ ಶಾಂತರಾಜು ಅವರು ಮಾತನಾಡಿ ಸ್ಕೌಟ್-ಗೈಡ್ ಚಳವಳಿ ಜಿಲ್ಲೆಯಲ್ಲಿ ಹರಡಲು ತಮ್ಮ ಸಂಪೂರ್ಣ ಸಹಕಾರ ನೀಡುವುದಾಗಿ ತಿಳಿಸಿದರು.

ದಿನಾಂಕ : 1.4.2005 ರಂದು ಎ.ಎಸ್.ಪಿ. ಕಾನ್ವೆಂಟ್ ಶಾಲೆಯಲ್ಲಿ ಕಬ್ಸ್ ಮಕ್ಕಳು ಪ್ರಥಮ ಬಾರಿಗೆ ದಾವಣಗೆರೆ ಜಿಲ್ಲೆಯ ಈ ಶಾಲೆಯ 5 ಕಬ್ಸ್ ಮಕ್ಕಳು ಬಂಗಾರದ ಬಾಣ ಪ್ರಶಸ್ತಿಯನ್ನು ಪಡೆದದ್ದಕ್ಕಾಗಿ ಸಮಾರಂಭವನ್ನು ಏರ್ಪಡಿಸಿದ್ದರು. ಶ್ರೀ ಜಂಬಗಿ ಶರಣಪ್ಪ ಜಿಲ್ಲಾ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು. ಸಮಾರಂಭದಲ್ಲಿ ಮಕ್ಕಳಿಗೆ ಗೋಲ್ಡನ್ ಆ್ಯರೋ, ಚತುರ್ಥ ಚರಣ ಪ್ರಶಸ್ತಿ ಪತ್ರವನ್ನು ಕಬ್ಸ್ ಮತ್ತು ಬುಲ್‌ಬುಲ್ಸ್ ಮಕ್ಕಳಿಗೆ ವಿತರಿಸಲಾಯಿತು. ಶ್ರೀ ವೈ. ಚನ್ನಬಸಪ್ಪ, ಶ್ರೀಮತಿ ಶಾಂತಯಾವಗಲ್, ಶ್ರೀಮತಿ ಬಿ. ರೇವಮ್ಮ ಶ್ರೀಮತಿ ಶಾರದಾ ಮಹಾರುದ್ರಯ್ಯ ಶಾಲೆ ಕಾರ್ಯದರ್ಶಿ ಶ್ರೀ ಡಿ.ಎಸ್. ಮಹಾರುದ್ರಯ್ಯ ಹಾಗೂ ಮಕ್ಕಳಿಗೆ ತರಬೇತಿ ನೀಡಿದ ಶ್ರೀಮತಿ ಶಾಂತಕುಮಾರಿ ಕಬ್ ಮಾಸ್ಟರ್ ಇವರಿಗೆ ಜಿಲ್ಲಾ ಸಂಸ್ಥೆ ಹಾಗೂ ಶಾಲಾ ಸಿಬ್ಬಂದಿ ಅಭಿನಂದನೆ ಸಲ್ಲಿಸಿದರು.

## ಕೋಲಾರ ದಕ್ಷಿಣ ಜಿಲ್ಲೆ :

ದಿನಾಂಕ 6.04.2005 ಬಂಗಾರಪೇಟೆಯಲ್ಲಿ ಸ್ಕೌಟ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ರ್‍ಯಾಲಿಯನ್ನು ಆಯೋಜಿಸಲಾಗಿತ್ತು. ಬೆಳಿಗ್ಗೆ 11.30ಕ್ಕೆ ಪಥ ಸಂಚಲನೆವನ್ನು ರಾಜ್ಯ ಸ್ಥಾನಿಕ ಆಯುಕ್ತರಾದ ಶ್ರೀ ಎಸ್. ಪಾಲ್‌ರಾಜ್ ರವರು ಉದ್ಘಾಟಿಸಿದರು. ರ್‍ಯಾಲಿಯಲ್ಲಿ ತಾಲ್ಲೂಕಿನ 12 ಶಾಲೆಗಳಿಂದ



ಸುಮಾರು 150 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು. ಕಾರ್ಯಕ್ರಮದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಜಿ.ವಿ. ರಾಮಾಂಜನೇಯಪ್ಪ ಜಿಲ್ಲಾ ಸಂಸ್ಥೆ ಅಧ್ಯಕ್ಷರಾದ ಶ್ರೀ ಎಸ್.ಆರ್. ವಿನ್ಸೆಂಟ್, ಜಿಲ್ಲಾ ಸ್ಕೌಟ್ ಆಯುಕ್ತೆ ಡಾ|| ಪ್ರಕಾಶ್ ಜಿಲ್ಲಾ ಗೈಡ್ ಆಯುಕ್ತೆ, ಶ್ರೀಮತಿ ಪ್ರೇಮಾ ವಿನ್ಸೆಂಟ್ ಹಾಗೂ ಇತರ ಪದ್ಧಾಧಿಕಾರಿಗಳು ಉಪಸ್ಥಿತರಿದ್ದರು.

ನಂತರ ನಡೆದ ಸಾಂಸ್ಕೃತಿಕ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಸರಸ್ವತಿ ವಿದ್ಯಾನಿಕೇತನ ಶಾಲೆಯ ಆಡಳಿತ ಮಂಡಳಿ ಸದಸ್ಯರ ಹಾಗೂ ನಗರಾಭಿವೃದ್ಧಿ ಪ್ರಾಧಿಕಾರದ ಅಧಕ್ಷರಾದ ಶ್ರೀ ಸೇತುರಾಂ ವಹಿಸಿದ್ದರು. ಗೈಡ್ಸ್ ಸಹಾಯಕ್ಕೆ ಆಯುಕ್ತೆ ಕಲ್ಯವಾಣಿ ಅತಿಥಿಗಳಾಗಿ ಭಾಗವಹಿಸಿದ್ದರು. ಸ್ಥಳೀಯ ಸಂಸ್ಥೆಯ ಸಹ ಕಾರ್ಯದರ್ಶಿ ಶ್ರೀ ನಂಜುಂಡಪ್ಪ ಸ್ವಾಗತಿಸಿದರು. ಕಾರ್ಯದರ್ಶಿ ಶ್ರೀ ರಂಗಪ್ಪ ವಂದಿಸಿದರು.

## ಬೆಂಗಳೂರು ಗ್ರಾಮಾಂತರ ಜಿಲ್ಲೆ :

ಪ್ರಗತಿ ವಿದ್ಯಾನಿಕೇತನ ಹಿರಿಯ ಪ್ರಾಥಮಿಕ ಶಾಲೆ ಹಾರೋಹಳ್ಳಿ ವತಿಯಿಂದ “ಸುನಾಮಿ ಸಂತ್ರಸ್ತರ ಪರಿಹಾರ ನಿಧಿ” ಗೆ ಸ್ಕೌಟ್ಸ್ ಮತ್ತು ಗೈಡ್ಸ್ ಪುಟಾಣಿಗಳು ಮತ್ತು ಇತರ ಎಲ್ಲಾ ಮಕ್ಕಳು ಸಾರ್ವಜನಿಕರಿಂದ 8,500/- ರೂಪಾಯಿ



(ಎಂಟು ಸಾವಿರದ ಐದು ನೂರು)ಗಳನ್ನು ಸಂಗ್ರಹಿಸಿ ಮಾನ್ಯಶ್ರೀ ಪಿ.ಜಿ.ಆರ್. ಸಿಂಧ್ಯಾರವರ ಮೂಲಕ ಮಾನ್ಯ ಮುಖ್ಯಮಂತ್ರಿಗಳ ನಿಧಿಗೆ ಡಿ.ಡಿ. ಮೂಲಕ ಅರ್ಪಿಸಲಾಯಿತು. ಶ್ರೀ ಶಿವನಂಜಪ್ಪ, ಜಿಲ್ಲಾ ಕಾರ್ಯದರ್ಶಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಶ್ರೀ ಟಿ.ಎಸ್. ನಾಗರಾಜರಾವ್ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಸ್ಥಳೀಯ ಪೋಷಕರುಗಳು ಹಾಜರಿದ್ದರು. ಉತ್ತಮ ಸೇವಾ ಮನೋಭಾವನೆಯನ್ನು ಎಲ್ಲಾ ಮಕ್ಕಳು ಬೆಳೆಸಿಕೊಳ್ಳುವಂತೆ ಹಾಗೂ ಎಲ್ಲಾ ಪೋಷಕರು ಮತ್ತು ಸಾರ್ವಜನಿಕರು ಅರಿಯುವಂತೆ ಮಾರ್ಗದರ್ಶನ ನೀಡಿದರು.

## ಕೊಡಗು ಜಿಲ್ಲೆ :

ರಾಷ್ಟ್ರಪತಿ ಪದಕದ ಪೂರ್ವಭಾವಿ ತರಬೇತಿ ಶಿಬಿರ : ದಿನಾಂಕ 4.4.2005 ರಿಂದ 5.4.2005ರ ವರೆಗೆ ರಾಷ್ಟ್ರಪತಿ ಪದಕ ಪೂರ್ವಭಾವಿ ತರಬೇತಿ ಶಿಬಿರವು ಗೋಣಿಕೊಪ್ಪಲಿನ ಕೂರ್ಗ್ ಪಬ್ಲಿಕ್ ವಸತಿ ಶಾಲೆಯಲ್ಲಿ ನಡೆಯಿತು. ಈ ಶಿಬಿರದಲ್ಲಿ 17 ಸ್ಕೌಟ್ ಮತ್ತು 37 ಗೈಡ್‌ಗಳು ಭಾಗವಹಿಸಿ ಶಿಬಿರದ ಲಾಭವನ್ನು ಪಡೆದು ಕೊಂಡರು. ಶಿಬಿರದ ಉದ್ಘಾಟನೆಯನ್ನು ಪ್ರೊ|| ಎಂ.ಡಿ. ನಂಜುಡ ಪ್ರಾಂಶುಪಾಲರು ಕೂರ್ಗ್ ಪಬ್ಲಿಕ್‌ಶಾಲೆ ಗೋಣಿಕೊಪ್ಪ ಇವರು ನೆರವೇರಿಸಿದರು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ನಾರಾಯಣ ಜೋಶಿಯವರು ವಹಿಸಿದ್ದರು. ಮುಕ್ತಾಯ ಸಮಾರಂಭ ಅಧ್ಯಕ್ಷತೆಯನ್ನು ಶ್ರೀಮತಿ ಬೊಳ್ಳಮ್ಮ ವಹಿಸಿದ್ದರು. ಅತಿಥಿಗಳಾಗಿ ಶ್ರೀಮತಿ ವಿಜಯಲಕ್ಷ್ಮಿ ಉಪಸ್ಥಿತರಿದ್ದರು. ಸಮಾರೋಪ ಭಾಷಣವನ್ನು ಶ್ರೀಮತಿ ಬಿ.ಬಿ. ಪದ್ಮರವರು ನೇರವೇರಿಸಿದರು. ಶ್ರೀಯುತ ಸತೀಶ್‌ರವರು ಹಾವುಗಳು ಪ್ರದರ್ಶನ ನೀಡಿ ಹಾವುಗಳು ಕಚ್ಚಿದಾಗ ಮಾಡಬೇಕಾದ ಪ್ರಥಮ ಚಿಕಿತ್ಸೆಯನ್ನು ವಿವರಿಸಿದರು. ಶಿಬಿರದ ನಾಯಕರಾಗಿ ಶ್ರೀ ಜಿಮ್ಮಿ ಸಿಕ್ವೇರಾ ಎ.ಎಲ್.ಟಿ. ಕಾರ್ಯ ನಿರ್ವಹಿಸಿದರು.

**ಮೂಲ ತರಬೇತಿ ಶಿಬಿರ :** ದಿನಾಂಕ 10.04.2005 ರಿಂದ 19.04.2005ರ ವರೆಗೆ ಗಾಳಿಬೀಡುವಿನ ನವೋದಯ ವಸತಿ ಶಾಲೆಯಲ್ಲಿ ಸ್ಕೌಟ್ ಮತ್ತು ಬುಲ್‌ಬುಲ್ ಮೂಲ ತರಬೇತಿ ಶಿಬಿರ ನಡೆಯಿತು.

ಸ್ಕೌಟ್ ವಿಭಾಗ ನಾಯಕರಾಗಿ ಶ್ರೀ ಜಿಮ್ಮಿ ಸಿಕ್ವೇರಾ ಎ.ಎಲ್.ಟಿ. ಕಾರ್ಯನಿರ್ವಹಿಸಿದರು. 20 ಶಿಕ್ಷಕ ಮತ್ತು ಶಿಕ್ಷಕಿಯವರಿಗೆ ಸ್ಕೌಟ್ ಮಾಸ್ಟರ್ ಮೂಲ ತರಬೇತಿಯನ್ನು ನೀಡಲಾಯಿತು.

**ಬುಲ್‌ಬುಲ್ ವಿಭಾಗದ :** ನಾಯಕಿಯಾರಾಗಿ ಕು|| ಡಿ. ಮೇರಿ, ಕಾರ್ಯನಿರ್ವಹಿಸಿದರು. 14 ಶಿಕ್ಷಕಿಯರು ಫ್ಲಾಕ್ ಲೀಡರ್ ಮೂಲ ತರಬೇತಿಯನ್ನು ಉತ್ತಮ ರೀತಿಯಲ್ಲಿ ಪಡೆದಿರುತ್ತಾರೆ.

**ಶಿಬಿರದ ಉದ್ಘಾಟನೆಯು** ಶ್ರೀಮತಿ ಭಾರತಿ ಶ್ರೀಧರ್ ಉಪಪ್ರಾಂಶುಪಾಲರು. ಸರಕಾರಿ ಪದವಿ ಪೂರ್ವ ಕಾಲೇಜು, ಮಡಿಕೇರಿ. ಇವರಿಂದ ನೇರವೇರಿತು. ಅಧ್ಯಕ್ಷತೆಯನ್ನು ಶ್ರೀ ಮಾರುತಿ ದಾಸಣ್ಣನವರ್ ಉಪನ್ಯಾಸಕರು ನವೋದಯ ವಿದ್ಯಾಲಯ, ಗಾಳಿಬೀಡು ಇವರು ವಹಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಎಂ. ಶ್ರೀಧರ್ ಕ್ಷೇತ್ರ ಶಿಕ್ಷಣಾಧಿಕಾರಿಗಳು ಮಡಿಕೇರಿ, ಶ್ರೀ ಬೇಬಿ ಮ್ಯಾಥ್ಯೂ, ಅಧ್ಯಕ್ಷರು ಭಾರತ್ ಸ್ಕೌಟ್ಸ್ ಗೈಡ್ ಸ್ಥಳೀಯ ಸಂಸ್ಥೆ ಮಡಿಕೇರಿ, ಇವರು ಭಾಗವಹಿಸಿದ್ದರು. ದಿನಾಂಕ 17.04.2005 ರಂದು ಸ್ನೇಕ್ ಶ್ಯಾಮ್‌ರವರಿಂದ ಉರಗ ಪ್ರದರ್ಶನ ಮತ್ತು ಪ್ರಥಮ ಚಿಕಿತ್ಸೆ ಬಗ್ಗೆ ಮಾಹಿತಿ ನೀಡಲಾಯಿತು. ದಿನಾಂಕ : 14.04.2005 ರಂದು ಡಾ|| ಬಾಬಾ ಸಾಹೇಬ್ ಅಂಬೇಡ್ಕರ್‌ರವರ ಜಯಂತಿಯನ್ನು ಸರ್ವಧರ್ಮ ಪ್ರಾರ್ಥನೆಯೊಂದಿಗೆ ಆಚರಿಸಲಾಯಿತು. 19.04.2005 ರಂದು ಸಮಾರೋಪ ಭಾಷಣವನ್ನು ಶ್ರೀ ಸುಬ್ರಮಣ್ಯಂ ಪ್ರಭಾರ ಜಿಲ್ಲಾಧಿಕಾರಿಗಳು ಕೊಡಗು ಜಿಲ್ಲೆ ಅವರು ನೆರವೇರಿಸಿದರು. ಅಧ್ಯಕ್ಷತೆಯನ್ನು ಶ್ರೀ ಜೀವನ್ ಚಿಣ್ಣಪ್ಪ, ಪ್ರಧಾನ ವರದಿಗಾರರು ದಿ ಹಿಂದೂ ದಿನ ಪತ್ರಿಕೆ ಇವರು ವಹಿಸಿದ್ದರು. ಅತಿಥಿಗಳಾಗಿ ಶ್ರೀ ಸಿದ್ದರಾಮೇಗೌಡ ಪ್ರಾಂಶುಪಾಲರು ಜವಹರ್ ನವೋದಯ ವಿದ್ಯಾಲಯ ಗಾಳಿಬಾಡು ಶ್ರೀಮತಿ ಮೀನಾಕ್ಷಿ ಪೂಣಚ್ಚ ಸಿ.ಎ. ಜಿಲ್ಲಾ ಪ್ರಧಾನ ಆಯುಕ್ತರು. ಶ್ರೀ ಕೆ.ಟಿ. ಬೇಬಿ ಮ್ಯಾಥ್ಯೂ ಅಧ್ಯಕ್ಷರು ಭಾರತ್ ಸ್ಕೌಟ್ ಗೈಡ್ ಸ್ಥಳೀಯ ಸಂಸ್ಥೆ ಮಡಿಕೇರಿ. ಇವರುಗಳು ಭಾಗವಹಿಸಿದ್ದರು.

## ಕೊಪ್ಪಳ ಜಿಲ್ಲೆ :



ಕುಷ್ಟಗಿ [illegible] ಸಿ [illegible] ಎರಡು [illegible] "ಡಸ್ಟ್‌ಬಿನ್"ಗಳನ್ನು ಸ್ಥಾಪಿಸಲಾಯಿತು, 'ಡಸ್ಟ್‌ಬಿನ್'ಗಳನ್ನು ದಿನಾಂಕ 2-4-2005ರಂದು ಕುಷ್ಟಗಿ ಶಾಸಕರಾದ ಶ್ರೀ ದೊಡ್ಡನಗೌಡ ಹ. ಪಾಟೀಲರು ಉದ್ಘಾಟಿಸಿದರು, ಕೊಪ್ಪಳ ಜಿಲ್ಲಾ ಉಪನಿರ್ದೇಶಕರಾದ ಶ್ರೀ ಡಿ.ಎಂ. ಮಂಟೂರ, ಶ್ರೀ ದೊಡ್ಡಬಸಪ್ಪ ನೀರಲಕೇರಿ ಬಿ.ಇ.ಓ., ಕುಷ್ಟಗಿ, ಶ್ರೀ ಬಸವರಾಜ ಬಾಗಲಿ ಶಿಕ್ಷಣ ಸಂಯೋಜನಕರು ಹಾಗೂ ಸಂಘಟನಾ ಕಾರ್ಯದರ್ಶಿಗಳು, ದೇವೇಂದ್ರಪ್ಪ ಬಳ್ಳೂಟಗಿ ಕಾರ್ಯಾಧ್ಯಕ್ಷ, ಮಹಾಲಿಂಗಪ್ಪ ಮ. ದೋಟಿಹಾಳಾ ಶ್ರೀ ದೊಡ್ಡನಗೌಡ ಗೌಡರ ಕಾರ್ಯದರ್ಶಿ, ಶ್ರೀ ವೆಂಕಟೇಶ ಡಿಪೋ ಮ್ಯಾನೇಜರ್ ಕುಷ್ಟಗಿ. ಇವರು ಸಮಾರಂಭದಲ್ಲಿ ಹಾಜರಿದ್ದರು. ಇದೇ ಸಂದರ್ಭದಲ್ಲಿ ದೆಹಲಿಯಲ್ಲಿ ಜರುಗಿದ ಕಬ್-ಬುಲ್‌ಬುಲ್ ಉತ್ಸವದಲ್ಲಿ ಪಾಲ್ಗೊಂಡ ಹಾಗೂ ರಾಜ್ಯ ಪುರಸ್ಕಾರ ಪಡೆದ ಸ್ಕೌಡ್-ಗೈಡ್ಸ್ ರಾಜ್ಯ ಪ್ರಶಸ್ತಿ ಪಡೆದ ಸ್ಥಳೀಯ ಸಂಸ್ಥೆಗೆ ಅಭಿನಂದನಾ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು.

## ಬೆಳಗಾಂ ಜಿಲ್ಲೆ :



ಶ್ರೀ ಬಿ.ಜಿ. ಹುಬ್ಬಳ್ಳಿ, ಸಹಕಾರ್ಯದರ್ಶಿ, ಬೈಲಹೊಂಗಲ ಸ್ಥಳೀಯ ಸಂಸ್ಥೆ ಇವರು ದಿನಾಂಕ 5-1-2005 ರಂದು ಸ್ವತಂತ್ರ ಪದವಿ ಪೂರ್ವ ಮಹಾವಿದ್ಯಾಲಯದಲ್ಲಿ ಪೃಥ್ವಿ ಮುಕ್ತ ರೋವರ್ ದಳವನ್ನು ಉದ್ಘಾಟಿಸಿದರು. ಡಾ॥ ಜಿ.ಎನ್. ಕಬ್ಬೂರ್, ಶ್ರೀ ನಾಗೇಶ್ ಆರ್. ಶಿವಪುರ, ಶ್ರೀ ಎಸ್.ಎಸ್. ಬಳಿಗಾರ, ಶ್ರೀ ರಾಮನಕಟ್ಟಿ, ಶ್ರೀ ಕುಂಬಾರ್ ಇತರರನ್ನು ಚಿತ್ರದಲ್ಲಿ ಕಾಣಬಹುದು.

## ಬೆಂಗಳೂರು ದಕ್ಷಿಣ ಜಿಲ್ಲೆ



Sri R.L. Jalappa, Member of Parliament, greeting
Sri M.K. Khan for his appointment as D.C.C. of Bangalore South Dist.



### ಸಾಹಸಯಾತ್ರೆ

ಕನಕಪುರ ತಾಲ್ಲೂಕಿನ
ಸಂತೇ ಕೋಡಿಹಳ್ಳಿಯ
ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆಯ
40 ಸ್ಕೌಟ್ಸ್ ಮತ್ತು ಮಕ್ಕಳು ರಾಮದೇವರ ಬೆಟ್ಟ
ಹೋಗಿ ಬೆಟ್ಟ ಹತ್ತಿದ ಈ ಸಾಸಹಯಾತ್ರೆಯಲ್ಲಿ
ಭಾಗವಹಿಸಿದ್ದರು. (10. ಕಿ.ಮೀ.)

Sri L.M. Jain, National Commissioner, & Mrs. Jain are seen with the Cub Masters, Flock Leaders, Cubs and Bul-Buls of Karnataka at the National Cub & Bul-Bul Utsav held at Scout Training Centre, Nizamuddin, New Delhi, From 07-03-2005 to 11-03-2005 21 Cubs & Bul-Buls along with 8 Adult Leaders from Karnataka attented in the event and secured grade "A"

## "PEACE IN A WOMEN'S WORLD" at Sangam, Pune



Smt. B.V. Rama Latha, District Commissioner (Guides) Bangalore North District attented the **"PEACE IN A WOMEN'S WORLD"** Programme held at Sangam, Pune.

The Programme included the following :

Exploring the Spheres of Peace, Learning about refugee issues, Discussing women's issues, Experiencing Indian Customs and life, etc.,

# NATIONAL LEVEL ESSAY COMPETITION
## AWARDEES FROM KARNATAKA

| Name | Address | Award Position |
|---|---|---|
| Ms. Harshitha M. | 5th Std. Indrali English Medium Hr. Primary School, Udupi | First |
| Master Sanju B.H. | Bharat Mata School, Tumkur | Second |
| Ms. Rashmi K. | 4th Std. Indrali English Medicum Hr. Primary School, Udupi | Third |

# NATIONAL LEVEL PAINTING COMPETITION
## AWARDEES FROM KARNATAKA

| Name | Address | Award Position |
|---|---|---|
| Master Vikas R. | Shri Ramakrishna English Primary School, Bijapur | First |
| Kum. Akshata | Canara Primary School, Urva Mangalore, | Second |
| Master Manjunath S. Palankar | C.D.O. Jain English Medium Primary School Sarvodaya Colony, Gadag | Second |
| Master Megraj R. Shetty | Infant Jesus Joyland School, D.K. | Second |

## ಸಮಾಜ ಸೇವೆ

ದಿನಾಂಕ 15.05.2005 ರಂದು ಬಸವ ಸಮಿತಿ ಆವರಣದಲ್ಲಿ ನಡೆದ ಆರೋಗ್ಯ ತಪಾಸಣಾ ಶಿಬಿರದಲ್ಲಿ ಶ್ರೀ ಚಾಮುಂಡಿ ಮುಕ್ತದಳ, ಬೆಂಗಳೂರು ಉತ್ತರ ಜಿಲ್ಲೆ, ಗಾಯಿತ್ರಿ ಗೈಡ್ ಮುಕ್ತದಳ, 15ನೇ ಕಂಠೀರವ ಸ್ಕೌಟ್ ಮುಕ್ತದಳ ಮತ್ತು ಕೊಂಡಜ್ಜಿ ಬಸಪ್ಪ ಸ್ಕೌಟ್ ಮುಕ್ತದಳ ಬೆಂಗಳೂರು ದಕ್ಷಿಣ ಜಿಲ್ಲೆಯಿಂದ 30 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿ ಸೇವೆ ಸಲ್ಲಿಸಿರುತ್ತಾರೆ. ಬೆಂಗಳೂರು ನಗರದ ವಿವಿಧ ವೈದ್ಯಕೀಯ ಕ್ಷೇತ್ರದಿಂದ 40 ಜನ ವೈದ್ಯರುಗಳು ಭಾಗವಹಿಸಿ. ಸಾರ್ವಜನಿಕರಿಗೆ ಆರೋಗ್ಯ ತಪಾಸಣೆ ನಡೆಸಿರುತ್ತಾರೆ. ಈ ಕಾರ್ಯಕ್ರಮವನ್ನು ಬೆಂಗಳೂರು ಬಸವ ಸಮಿತಿಯವರು ಏರ್ಪಡಿಸಿದ್ದರು.

**ಪಲ್ಸ್ ಪೋಲಿಯೋ ಕಾರ್ಯಕ್ರಮ**

ದಿನಾಂಕ : 15-05-2005 ರಂದು ನಡೆದ ರಾಜ್ಯ ಮಟ್ಟದ ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ಸ್ಕೌಟ್ಸ್, ಗೈಡ್ಸ್, ರೋವರ್ಸ್, ರೇಂಜರ್ಸ್‌ಗಳು ಲಸಿಕಾ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

# ಸ್ಕೌಟ್ ಸಮಾರಂಭಗಳು

(ಮುಂದುವರೆದುದು)

ಎಸ್. ಶ್ರೀನಿವಾಸನ್ ಎಲ್.ಟಿ.(ಸ್ಕೌ)

## ಶಿಬಿರಾಗ್ನಿ

"ಶಿಬಿರಾಗ್ನಿ" ಕಾರ್ಯಕ್ರಮವು ಈ ಕೆಳಕಂಡ ಹಂತಗಳನ್ನು ಒಳಗೊಂಡಿರುತ್ತದೆ.

1) ಪೂರ್ವ ಸಿದ್ಧತೆ 2) ಕಾರ್ಯಕ್ರಮ ನಡೆಸುವುದು 3) ಶಿಬಿರಾಗ್ನಿ ನಂತರದ ಕರ್ತವ್ಯಗಳು

**1) ಪೂರ್ವಸಿದ್ಧತೆ :**

ಶಿಬಿರಾಗ್ನಿ ನಡೆಸುವ ಜವಾಬ್ದಾರಿ ಹೊತ್ತಿರುವ ಪಟಾಲಂನ ನಾಯಕರು ಪಟಾಲಂ ಸಲಹಾ ಸಭೆ (Patrol in Council) ನಡೆಸಿ ತನ್ನ ಸದಸ್ಯರಿಗೆ ಕರ್ತವ್ಯ ಹಂಚಿಕೆಮಾಡಬೇಕು.

ಈ ಕೆಳಕಂಡ ಪೂರ್ವಸಿದ್ಧತೆಗಳು ಅವಶ್ಯಕ

1) ಶಿಬಿರಾಗ್ನಿ ನಡೆಸುವ ಜವಾಬ್ದಾರಿ ಸಾಮಾನ್ಯವಾಗಿ ಪಟಾಲಂ ನಾಯಕನದಾಗಿರುತ್ತದೆ. ಅಥವಾ ಆ ಕಾರ್ಯವನ್ನು ತನ್ನ ಪಟಾಲಂನ ಇನ್ನೊಬ್ಬರಿಗೆ ವಹಿಸಬಹುದು. ಆತನನ್ನು 'ಶಿಬಿರಾಗ್ನಿ ನಾಯಕ' ಎನ್ನುತ್ತೇವೆ. (ಶಿ.ನಾ.) ಶಿಬಿರಾಗ್ನಿ ನಾಯಕನು ತಂಡದ ಎಲ್ಲಾ ಪಟಾಲಂಗಳ ಕಾರ್ಯಕ್ರಮಗಳನ್ನು ಸಂಗ್ರಹಿಸಿ ಪಟ್ಟಿ ಮಾಡಬೇಕು. ಈ ಕಾರ್ಯಕ್ರಮಗಳಲ್ಲಿ ವೈವಿಧ್ಯತೆ ಇರುವಂತೆ ಜೋಡಿಸಿಕೊಳ್ಳಬೇಕು.

2) ಪಟಾಲಂ ಸದಸ್ಯರೊಡಗೂಡಿ ಶಿಬಿರಾಗ್ನಿಗೆ ಅವಶ್ಯಕವಿರುವ ಕಟ್ಟಿಗೆ ಸಂಗ್ರಹಿಸಬೇಕು. ಪರಿಸರ ಹಾಳು ಮಾಡದಂತೆ ಈ ಸಂಗ್ರಹಣೆ ಆಗಬೇಕು.

3) ಶಿಬಿರ ನಾಯಕರೊಡನೆ ಸಮಾಲೋಚನೆ ನಡೆಸಿ ಶಿಬಿರಾಗ್ನಿ ನಡೆಸುವ ಸ್ಥಳವನ್ನು ಆಯ್ಕೆ ಮಾಡಿಕೊಳ್ಳಬೇಕು. ಸ್ಥಳವನ್ನು ಆಯ್ಕೆ ಮಾಡುವಾಗ ಈ ಕೆಳಕಂಡ ಅಂಶಗಳನ್ನು ಗಮನದಲ್ಲಿರಿಸಿಕೊಂಡಿರಬೇಕು. (ಅ) ಬೆಂಕಿಯಿಂದ ಹಸಿರು ಹಾಳಾಗಬಾರದು (ಆ) ವಾಸ ಮಾಡುವ ಸ್ಥಳಗಳಿಗೆ (ಗುಡಾರಗಳು) ಹಾನಿಯಾಗಬಾರದು. (ಇ) ಶಿಬಿರಾರ್ಥಿಗಳಿಗೆ ಹಾಗೂ ಅತಿಥಿಗಳಿಗೆ ಕುಳಿತುಕೊಳ್ಳಲು ಸ್ಥಳಾವಕಾಶ ಇರಬೇಕು. (ಈ) ಕಾರ್ಯಕ್ರಮ ನೀಡಲು ಸಾಕಷ್ಟು ಸ್ಥಳಾವಕಾಶ ಇರಬೇಕು. (ಉ) ಧ್ವಜದ ಆವರಣವನ್ನು ಹೊರತು ಪಡಿಸಬೇಕು. (ಊ) ತೇವ ರಹಿತ ಹಾಗೂ ಸೂಳ್ಳೆಗಳಿಂದ ಮುಕ್ತವಾಗಿರಬೇಕು. (ಋ) ಗಾಳಿ ರಭಸವಾಗಿ ಬೀಸುವ ಪ್ರದೇಶವಾಗಿರಬಾರದು

4) ನಿಗದಿತ ಸ್ಥಳದಲ್ಲಿ ಕಟ್ಟಿಗೆಯನ್ನು ಪಿರಮಿಡ್ ಆಕಾರದಲ್ಲಿ ಜೋಡಿಸಿ ಸಿದ್ಧಗೊಳಿಸಬೇಕು. ಬೆಂಕಿಯು ಸುಲಭವಾಗಿ ಹೊತ್ತಿಕೊಳ್ಳಲು ಅನುವಾಗುವಂತೆ, ಸಣ್ಣ ಸಣ್ಣ ಕಟ್ಟಿಗೆ ಚೂರು, ಒಣಗಿದ ಎಲೆ ಮುಂತಾದವುಗಳನ್ನು ನಡುವೆ ಹಾಕಿರಬೇಕು. ಕಟ್ಟಿಗೆ ಚೆನ್ನಾಗಿ ಒಣಗಿರಬೇಕು. ಒಂದೆರಡು ಹಸಿ ಕಟ್ಟಿಗೆಗಳೂ ಇರಬೇಕು.

5) ಅಗ್ನಿಯನ್ನು ಪ್ರಜ್ವಲಿಸುವ ವಿಧಾನವನ್ನು ಆಯ್ಕೆ ಮಾಡಿಕೊಳ್ಳಬೇಕು ಹಾಗೂ ಆರಿಸಿಕೊಂಡ ವಿಧಾನಕ್ಕೆ ತಕ್ಕ ಹಾಗೆ ಸದಸ್ಯರಿಗೆ ಅದರ ಜವಾಬ್ದಾರಿ ವಹಿಸಬೇಕು.

6) ಶಿಬಿರಾರ್ಥಿಗಳು ಹಾಗೂ ಅತಿಥಿಗಳಿಗೆ ಆಸನ ವ್ಯವಸ್ಥೆ ಗಮನಿಸಬೇಕು.

7) ಶಿಬಿರಾಗ್ನಿಯನ್ನು ಉದ್ಘಾಟಿಸಲು ಅತಿಥಿಗಳನ್ನು ನಿಗದಿಪಡಿಸಿಕೊಳ್ಳಬೇಕು. ಈ ಬಗ್ಗೆ ಶಿಬಿರದ ನಾಯಕರೊಡನೆ ಸಮಾಲೋಚನೆ ಮಾಡಬೇಕು.

8) ಪ್ರತಿ ಕಾರ್ಯಕ್ರಮದ ಅಂತ್ಯದಲ್ಲಿ ಘೋಷಣೆ (yell) ಹೇಳಲು ಒಬ್ಬ ಉದ್ಘೋಷಕನನ್ನು (Yell Master) ನೇಮಿಸಬೇಕು. ವಿವಿಧ ಘೋಷಣೆಗಳನ್ನು ಕಾರ್ಯಕ್ರಮಗಳಿಂದ ಆರಿಸಿಕೊಳ್ಳಲು ಸಾಮರ್ಥ್ಯ ಹಾಗೂ ಸಮಯ ಸ್ಫೂರ್ತಿ ಹೊಂದಿರಬೇಕು.

9) ಬೆಂಕಿಯನ್ನು ನಿಯಂತ್ರಿಸುವ ಜವಾಬ್ದಾರಿಯನ್ನು ಇಬ್ಬರಿಗೆ ವಹಿಸಬೇಕು. ಬೆಂಕಿ ಹೆಚ್ಚಾದಾಗ ನಿಯಂತ್ರಿಸಲು ಒಂದು ಬಕೆಟಿನಲ್ಲಿ ನೀರನ್ನು ವ್ಯವಸ್ಥೆ ಮಾಡಿಕೊಂಡಿರಬೇಕು.

10) ಕಾರ್ಯಕ್ರಮ ನೀಡುವ ಪಟಾಲಂಗಳು, ತಮ್ಮ ತಮ್ಮ ಕಾರ್ಯಕ್ರಮಗಳನ್ನು ಚೆನ್ನಾಗಿ ತಾಲೀಮು ಮಾಡಿಕೊಂಡಿರಬೇಕು. ಸ್ಥಳೀಯವಾಗಿ ದೊರಕುವ ಎಲೆ, ಕಡ್ಡಿ, ಹೂವು, ಕಾಗದ ಮುಂದತಾವುಗಳಿಂದ ವೇಷ ಭೂಷಣ ತಯಾರಿಸಿಕೊಳ್ಳಬೇಕು. ಪರಿಸರ ಸಂರಕ್ಷಣೆ ಬಗ್ಗೆ ಕಾಳಜಿ ಇರಬೇಕು.

*ಮುಂದುವರೆಯುವುದು....*




# Changing the World!

Dr. Eduardo Missoni
Secretary General,
World Organization of the Scout Movement, Geneva, Switzerland

As Scouts, following the legacy of our founder Lord Baden Powell, we do our best "to leave this world a little better than we found it".

Everywhere Scouting works for peace and for a just, fully inclusive and caring Society, respectful of human rights and of the environment, for present and future generations.

With its 28 millions individual members active at community level in more than 215 countries and territories, Scouting represents the best positioned globle movement to the achievement of the development goals shared by the international community.

To accomplish our MISSION however, we need allies among other international and global actors, especially the Programmes and Agencies of the United Nations (such as UNICEF, UNESCO, FAO, ILO, WHO, UNHCR, UNEP, UNDP and others) that are closer to our issues and share our concerns as well as other share our VISION; an example being the alliance of CEOs of the so called "Big 7" youth organisations and movements.

We want our allies to look at the Scout Movement as a credible, trustworthing partner. Besides seeing what scouts can do at local level in community and development projects, we want our partners to fully value their work with Scout organisations everywhere as an investment in an influential, value-based, educational movement, thus as an investment in future responsible, committed citizens and leaders.

Work done and agreements signed at a global level between WOSM and other international organisations, should open doors and facilitate collaboration and joint action at local level, with reciprocal advantage, optimising resources and maximising impact.

To change the world for better is an enormous challenge. Working together will enhance our chances of success.

*Sources : External Relations and Partnership (WOSM)*

## OBSERVANCE OF WORLD ENVIRONMENT DAY ON 5th JUNE 2005

The Observance of World Environment Day will be held on 5th June 2005, throughout the World. Organise Route March, Painting Competition & Essay Competition on Environment. Please involve the Scouts & Guides to participate in the event at the Unit / Taluk / District and State Level Programme

Four Pillars of




Scouting / Guiding

**100** A Hundred years of Promise **2007**

Scouting will celebrate its Centenary in 2007

YOUR SUPPORT WILL HELP US REACH OUR GOAL



## VISION STATEMENT - 2013

***The Bharat Scouts & Guides, the largest Youth Movement will be self reliant, value based, quality oriented, well managed and offering innovative, challenging program based on the needs of the young people***

Regd as News Paper (Magazine) No : **CPMG/KA/BGW-549/2003-05**
Permitted to Post under WPP System
Vide No.: **WPP-87** of SSP, BANGALORE WEST
Posted at: Bangalore City H.P.O. on 30-05-2005



ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

KARNATAKA SCOUT & GUIDE *News Magazine*

If not delivered please return to :

**EDITOR, Karnataka Scout & Guide**
State Headquarters, Prof. P. Sivashankar Circle
Kondajji Basappa Road, Fort
Bangalore - 560 002. Ph:26701227.



25th Asia-Pacific Regional Scout Jamboree, 2005



Scouting: The Road to Peace

28 December 2005 - 3 January 2006
Had Yao, Sattahip, Chonburi, Thailand



SCOUTS & GUIDES AT KONDAJJI

***Published for :*** The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.